CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೯, ೨೦೦೪ (ಮಾರ್ಗಶಿರ ೧೮, ಶಕ ವರ್ಷ ೧೯೨೬) | ಸಂಚಿಕೆ ೪೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 64 ಸಸಿವಿ 2002, ದಿನಾಂಕ: 29.11.2003.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 2003, ದಿನಾಂಕ: 29.12.2003.
3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ರವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಆನಾಸ 132 ಪ್ರಕಾ 2004, ದಿನಾಂಕ: 12.10.2004.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 29.1.2003ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 29.10.1999 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ದಿನಾಂಕ: 31.12.2003 ರವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ - ಹುದ್ದೆ ಎಂದು ಉನ್ನತೀಕರಿಸಲಾಗಿರುತ್ತದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರಲ್ಲಿ ಪ್ರಧಾನ ಕಾರ್ಯದರ್ಶಿಗಳ ಆಪ್ತ ಶಾಖೆಗೆ ನಿಗದಿಪಡಿಸಿರುವ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ಮಂಜೂರು ಮಾಡಲಾಗಿರುತ್ತದೆ.

ಪ್ರಸ್ತುತ ಈ ಹುದ್ದೆಯ ಕಾಲಾವಧಿಯು ದಿನಾಂಕ: 31.12.2004 ಕ್ಕೆ ಮುಕ್ತಾಯಗೊಳ್ಳಲಿದೆ. ಆದರೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಇವರಿಂದ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಈ ಹುದ್ದೆಯನ್ನು ದಿನಾಂಕ: 1.1.2005 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 2004, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.1.2005 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 1283

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಇ-ಗೌರ್ನೆನ್ಸ್ ವಿಭಾಗದ ಉಪ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 91 ಆಸೇವ 2003, ದಿನಾಂಕ: 27.8.2003.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 77 ಸಸಿವಿ 2003, ದಿನಾಂಕ: 27.10.2003.

3) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 42 ಇಆಇ 2004, ದಿನಾಂಕ: 5.10.2004.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 27.8.2003 ರ ಅಧಿಸೂಚನೆಯಲ್ಲಿ ಶ್ರೀಮತಿ ಜಿ. ಸತ್ಯವತಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಇವರನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಆಡಳಿತ ಸುಧಾರಣೆ) ವಿಭಾಗದಲ್ಲಿ ಹೊಸದಾಗಿ ಸೃಜಿಸಲಾದ ಉಪ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಈ ಕಾರಣದಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 77 ಸಸಿವಿ 2003, ದಿನಾಂಕ: 27.10.2003 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಇ-ಗೌರ್ನೆನ್ಸ್ (ಆಡಳಿತ ಸುಧಾರಣೆ) ವಿಭಾಗದಲ್ಲಿ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಈ ಕೆಳಕಾಣಿಸಿದ ಹುದ್ದೆಗಳೊಂದಿಗೆ ಸೃಜಿಸಲಾಗಿದೆ.

| | |
|---|---|
| 1. ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |
| 2. ಕಿರಿಯ ಸಹಾಯಕ | 1 ಹುದ್ದೆ |
| 3. ದಲಾಯತ್ | 1 ಹುದ್ದೆ |

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 5.10.2004ರ ಅನಧಿಕೃತ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ ಇ-ಆಡಳಿತ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ರವರು ಸದರಿ ಉಪಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಎರಡು ವರ್ಷಗಳವರೆಗೆ ಮುಂದುವರೆಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 86 ಸಸಿವಿ 2004, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಇ-ಗೌರ್ನೆನ್ಸ್ (ಆಡಳಿತ ಸುಧಾರಣೆ) ವಿಭಾಗದಲ್ಲಿರುವ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಅದರ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 9.9.2004 ರಿಂದ ಒಂದು ವರ್ಷದ ಅವಧಿಯವರೆಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1284

**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## HEALTH AND FAMILY WELFARE SECRETARIAT
## CORRIZENDUM
### No. HFW 173 IMM 2004, Bangalore, Dated 30th October 2004

In Notification - I, II, III vide No. HFW 62 IMM 2002 (P), dated 23.7.2003, for the Sl.No. 62 & 63 in the table the following shall be substituted:

| | | |
|---|---|---|
| 62 | Asst. Drugs Controller, Mysore Circle-I | Area comprising the entire Mysore Dist., |
| 63 | Drugs Inspector, Mysore Circle-I | Area comprising the entire Mysore Dist., |

By Order and in the Name of the Governor of Karnataka,

PR-1278

**Chomanayak. G.**
Under Secretary to Government,
Health & Family Welfare Department.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ ಹಾಗೂ ತಾಲ್ಲೂಕಿನ ಖಾಜಿಕೋಟನೂರ ಕೆರೆ ಸಲುವಾಗಿ ವೆಂಕಟಬೆನ್ನೂರ ಹಾಗೂ ಶ್ರೀನಿವಾಸ ಸರಡಗಿ ಗ್ರಾಮಗಳ ಭೂಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಭೂ ಪರಿಹಾರ ಧನವನ್ನು ನ್ಯಾಯಾಲಯದ ಆದೇಶದಂತೆ ಠೇವಣಿ ಮಾಡಲು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 26.8.2004ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವ/ ಭೂಸ್ವಾಪ್ರ/04-05/4216.

**ಪ್ರಸ್ತಾವನೆ:-**

ಗುಲ್ಬರ್ಗಾ ಜಿಲ್ಲೆ ಮತ್ತು ತಾಲ್ಲೂಕಿನ ಖಾಜಿಕೋಟನೂರ ಕೆರೆಯ ಸಲುವಾಗಿ ಶ್ರೀನಿವಾಸ ಸರಡಗಿ ಮತ್ತು ವೆಂಕಟಬೆನ್ನೂರ ಗ್ರಾಮದ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆಯನ್ನು ದಿನಾಂಕ: 25.5.1994 ರಲ್ಲಿ ಹೊರಡಿಸಿ ದಿನಾಂಕ: 30.6.1994ರ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ ಹಾಗೂ ಕಲಂ 6(1) ರಡಿ ಅಧಿಸೂಚನೆಯನ್ನು ದಿನಾಂಕ: 9.11.1995ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ. ಭೂಪರಿಹಾರ ಧನದ ಬಗ್ಗೆ ವಿಶೇಷ ಭೂಸ್ವಾಧೀನಾಧಿಕಾರಿಗಳು, ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳು, ಗುಲ್ಬರ್ಗಾ ರವರು ದಿನಾಂಕ: 22.2.1996 ರಲ್ಲಿ ಐತೀರ್ಪು ಹೊರಡಿಸಿ ಖುಷ್ಕಿ ಜಮೀನಿಗೆ ಪ್ರತಿ ಎಕರೆಗೆ 12,600.00 ರೂ.ಗಳು, ನೀರಾವರಿ ಜಮೀನಿಗೆ ಪ್ರತಿ ಎಕರೆಗೆ 18,900.00 ರೂ.ಗಳು ಮತ್ತು ಪೋಟಖರಾಬ್ ಜಮೀನಿಗೆ ಪ್ರತಿ ಎಕರೆಗೆ 800.00 ರೂ.ಗಳನ್ನು

ನಿಗದಿಪಡಿಸಿರುತ್ತಾರೆ. ಈ ರೀತಿ ಸ್ವಾಧೀನಪಡಿಸಿಕೊಂಡ ಒಟ್ಟು 126 ಎಕರೆ 26 ಗುಂಟೆ ಜಮೀನಿಗೆ ಶೇ. 12 ರಷ್ಟು ಹೆಚ್ಚುವರಿ ಮಾರುಕಟ್ಟೆ ದರ ಹಾಗೂ ಶೇ. 30 ರಷ್ಟು ಸೊಲೇಷಿಯಂ ಸೇರಿಸಿ 18,55.985.00 ರೂ.ಗಳಿಗೆ ಐತೀರ್ಪು ಹೊರಡಿಸಿದ್ದಾರೆ.

ಭೂಸ್ವಾಧೀನಕ್ಕೊಳಪಟ್ಟ 126.26 ಎಕರೆ ಜಮೀನಿನ ಪೈಕಿ 16.15 ಎಕರೆ ಜಮೀನಿನ ಭೂಮಾಲೀಕರು ವಿಶೇಷ ಭೂಸ್ವಾಧೀನಾಧಿಕಾರಿಗಳು ನಿಗದಿಪಡಿಸಿರುವ ಪರಿಹಾರ ಧನವನ್ನು ಒಪ್ಪಿಕೊಳ್ಳದೆ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಹೆಚ್ಚಿನ ಭೂಪರಿಹಾರಕ್ಕಾಗಿ ಎಲ್.ಎ.ಸಿ. 525, 523, 524, 531, 532, 533, 534, 535 ಮತ್ತು 539/98 ರಲ್ಲಿ ಅಡಿಷನ್ ಸಿವಿಲ್ ಜಡ್ಜ್ (ಸೀನಿಯರ್ ಡಿವಿಜನ್) ನ್ಯಾಯಾಲಯ, ಗುಲ್ಬರ್ಗಾದಲ್ಲಿ ದಾವೆ ದಾಖಲಿಸಿದ್ದು, ನ್ಯಾಯಾಲಯವು ಈ ಬಗ್ಗೆ ದಿನಾಂಕ: 16.2.2002 ರಲ್ಲಿ ಈ ಎಲ್ಲಾ ಪ್ರಕರಣಗಳಿಗೆ ಏಕರೂಪ ಆದೇಶ ನೀಡಿ ಮಾರುಕಟ್ಟೆ ಬೆಲೆಯನ್ನು ಎಕರೆ ಒಂದಕ್ಕೆ 35,000.00 ರೂ.ಗಳಂತೆ ನಿಗದಿಪಡಿಸಿದೆ. ಎಲ್ಲಾ ಪ್ರಕರಣಗಳಲ್ಲಿ ಕಬ್ಜೆ ಪಡೆದ ದಿನಾಂಕದಿಂದ ಒಂದು ವರ್ಷಕ್ಕೆ ಶೇ. 9 ರಷ್ಟು ಬಡ್ಡಿ ಹಾಗೂ ನಂತರ ವಾರ್ಷಿಕ ಶೇ. 15 ರಷ್ಟು ಬಡ್ಡಿಯನ್ನು ಪಡೆಯಲು ಅರ್ಹರಾಗಿರುತ್ತಾರೆ ಎಂದು ಆದೇಶ ನೀಡಿದೆ. ಸಿವಿಲ್ ನ್ಯಾಯಾಲಯದ ಆದೇಶದ ಮೇಲೆ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು ಇಲಾಖೆಯು ದಿನಾಂಕ: 1.4.2003 ರ ಪತ್ರ ಸಂಖ್ಯೆ: ಲಾ 278 ಎಲ್ಎಸ್‌ಜಿ 2002 ರಲ್ಲಿ ಅಭಿಪ್ರಾಯ ನೀಡಿದೆ. ಇದರಿಂದಾಗಿ ಭೂಮಾಲೀಕರಿಗೆ ನೀಡಬೇಕಾದ ಪರಿಹಾರ ಧನವನ್ನು ಲೆಕ್ಕಹಾಕಿದ್ದು, ಹಾಗೆ ಲೆಕ್ಕ ಹಾಕುವಾಗ ಪ್ರಸ್ತುತ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ 4(1) ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಬಡ್ಡಿ ಲೆಕ್ಕಹಾಕಿ ಒಟ್ಟು ಭೂ ಪರಿಹಾರ ಮೊತ್ತ 13,10,875.00 ರೂ.ಗಳನ್ನು ಬಿಡುಗಡೆ ಮಾಡಲು ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರವಲಯ, ಬಿಜಾಪುರ ರವರು ಸರ್ಕಾರಕ್ಕೆ ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 38 ಭೂಸ್ವಾಪ್ರ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಗುಲ್ಬರ್ಗಾ ಜಿಲ್ಲೆ ಮತ್ತು ತಾಲ್ಲೂಕಿನ ಖಾಜಿಕೋಟನೂರ ಕೆರೆಯ ಸಲುವಾಗಿ ವೆಂಕಟಬೆನ್ನೂರ, ಶ್ರೀನಿವಾಸ ಸರಡಗಿ ಗ್ರಾಮಗಳ ಭೂಸ್ವಾಧೀನ ನ್ಯಾಯಾಲಯ ಪ್ರಕರಣಗಳಾದ ಎಲ್.ಎ.ಸಿ. ಸಂಖ್ಯೆ: 525, 523, 524, 531, 532, 533, 534, 535 ಮತ್ತು 539/98 ಗಳಲ್ಲಿ ನ್ಯಾಯಾಲಯ ಆದೇಶದಂತೆ ಲೆಕ್ಕ ಹಾಕಲಾದ ಒಟ್ಟು ಪರಿಹಾರ ಧನದ ಮೊತ್ತ ರೂ. 13,10,875.00 (ಹದಿಮೂರು ಲಕ್ಷ ಹತ್ತು ಸಾವಿರದ ಎಂಟುನೂರ ಎಪ್ಪತ್ತೈದು ಮಾತ್ರ) ಗಳನ್ನು ಲೆಕ್ಕ ಶೀರ್ಷಿಕೆ 4702 (ಯೋಜನೆ) ಭೂಪರಿಹಾರದಡಿ ಹೆಚ್ಚುವರಿ ಅನುದಾನವಾಗಿ ಸೇರಿಸಿ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 26.10.2004 ರ ಟಿಪ್ಪಣಿ ಸಂಖ್ಯೆ: ಲೋಇ 1033 ಆಕೋ-1/2004 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1285

**ಎಂ.ಎನ್. ಮಂಜುನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಬುಳ್ಳಾ ಬಾಲಚಂದ್ರ ವಿರೂಪಾಕ್ಷಪ್ಪ, ವಕೀಲರು, ಹುಬ್ಬಳ್ಳಿ ಇವರನ್ನು ಶ್ರೀ ಆರ್.ಬಿ. ಕೂಡ್ಲಿ, ನೋಟರಿ, ಹುಬ್ಬಳ್ಳಿ ಇವರ ರಾಜೀನಾಮೆಯಿಂದ ತೆರವಾದ ನೋಟರಿ ಹುದ್ದೆಗೆ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲಾ 51 ಎಲ್‌ಸಿಎಲ್ 04, ದಿನಾಂಕ: 3.7.04.
2) ಸರ್ಕಾರಿ ಪತ್ರ ಸಂಖ್ಯೆ: ಲಾ 51 ಎಲ್‌ಸಿಎಲ್ 04, ದಿನಾಂಕ: 26.7.04.
3) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರ ಪತ್ರ ಸಂಖ್ಯೆ: Adm.No. 1360/2004, dtd: 15.9.04.

**ಪ್ರಸ್ತಾವನೆ:-**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 3.7.2004ರ ಸರ್ಕಾರಿ ಆದೇಶದಲ್ಲಿ ಶ್ರೀ ಆರ್.ಬಿ. ಕೂಡ್ಲಿ, ನೋಟರಿ, ಹುಬ್ಬಳ್ಳಿ ಇವರು ನೋಟರಿ ಹುದ್ದೆಗೆ ನೀಡಿದ ರಾಜೀನಾಮೆಯನ್ನು ಅಂಗೀಕರಿಸಲಾಗಿದೆ, ಸದರಿ ಹುದ್ದೆಯ ನೇಮಕಾತಿಗೆ ನೋಟರಿ ನಿಯಮಗಳು 1956 ರನ್ವಯ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಧಾರವಾಡ ಇವರನ್ನು ಕೋರಲಾಗಿತ್ತು.

ಮೇಲೆ ಕ್ರಮಾಂಕ (3) ರಲ್ಲಿ ಓದಲಾಗಿರುವ ದಿನಾಂಕ: 15.9.2004ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ, ಇವರು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ ನಿಗದಿತ ನಮೂನೆಯಲ್ಲಿ ಮೆಮೋರಿಯಲ್ಸ್‌ಗಳ ಜೊತೆ ನೋಟರಿ ಹುದ್ದೆಯ ನೇಮಕಾತಿಗಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 51 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2004**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಬುಳ್ಳಾ ಬಾಲಚಂದ್ರ ವಿರೂಪಾಕ್ಷಪ್ಪ, ವಕೀಲರು, ನಂ. 368, ಅರವಿಂದ ನಗರ, ಹಳೇ ಹುಬ್ಬಳ್ಳಿ-24, ಧಾರವಾಡ ಜಿಲ್ಲೆ, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹುಬ್ಬಳ್ಳಿ-ಧಾರವಾಡ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000.00 (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1286

**ದಯಾನಂದ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕಾನೂನು ಇಲಾಖೆ (ಆಡಳಿತ-2).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಇಲಾಖೆಯ ಗ್ರೂಪ್ ಸಿ ಮತ್ತು ಡಿ ನೌಕರರ ಅಂತರ ಜಿಲ್ಲೆಯ ವರ್ಗಾವಣೆ ಕುರಿತು.

**ಓದಲಾಗಿದೆ:** ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ ಇವರ ಪತ್ರ ಸಂಖ್ಯೆ: ಹಿಂವನಿ/ಸಿಬ್ಬಂದಿ-2/ಸಿಆರ್-84/04-05, ದಿನಾಂಕ: 9.9.2004.

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ ಇವರು ರಾಜ್ಯ ಸರ್ಕಾರಿ ನೌಕರರ ವರ್ಗಾವಣೆ ಬಗ್ಗೆ ಸರ್ಕಾರವು ಮಾರ್ಗಸೂಚಿಗಳನ್ನು ಹೊರಡಿಸಿದ್ದು, ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ: 22.11.2001ರ ಕಂಡಿಕೆ 10(1) ಬಿ(2) ರಲ್ಲಿ ಗ್ರೂಪ್ ಸಿ ಮತ್ತು ಡಿ ನೌಕರರ ಅಂತರ ಜಿಲ್ಲೆ ವರ್ಗಾವಣೆಗೆ ಇಲಾಖೆಯ ಮುಖ್ಯಸ್ಥರೊಬ್ಬರನ್ನು ನಾಮನಿರ್ದೇಶನ ಮಾಡುವ ಅವಕಾಶವನ್ನು ಸಂಬಂಧಪಟ್ಟ ಆಡಳಿತ ಇಲಾಖೆಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳಿಗೆ ಕಲ್ಪಿಸಲಾಗಿದೆ. ಅದರಂತೆ, ಹಿಂದುಳಿದ ವರ್ಗಗಳ ಇಲಾಖೆಯ ಗ್ರೂಪ್ ಸಿ ಮತ್ತು ಡಿ ನೌಕರರ ಅಂತರ ಜಿಲ್ಲಾ ವರ್ಗಾವಣೆಗಾಗಿ ರಚಿಸಲಾಗಿರುವ ವೃಂದ ನಿರ್ವಹಣಾ ಪ್ರಾಧಿಕಾರದಲ್ಲಿ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಇಲಾಖೆ ಇವರನ್ನು ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡುವಂತೆ ಸರ್ಕಾರದ ಆದೇಶವನ್ನು ಕೋರಿರುವರು. ಆದುದರಿಂದ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಸಕಇ 261 ಬಿಇಟಿ 2004, ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2004

ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಹಿಂದುಳಿದ ವರ್ಗಗಳ ಇಲಾಖೆಯ ಗ್ರೂಪ್ ಸಿ ಮತ್ತು ಡಿ ನೌಕರರ ಅಂತರ ಜಿಲ್ಲೆ ವರ್ಗಾವಣೆಗಾಗಿ ರಚಿಸಲಾಗಿರುವ ವೃಂದ ನಿರ್ವಹಣಾ ಪ್ರಾಧಿಕಾರದಲ್ಲಿ "ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು" ಇವರನ್ನು ಮುಂದಿನ ಆದೇಶವಾಗುವವರೆಗೂ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿ ಸರ್ಕಾರವು ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1288

**ಎಂ.ಎಸ್. ಮರುಳಸಿದ್ಧಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ವೃಂದ ಮತ್ತು ನೇಮಕಾತಿ ನಿಯಮಗಳ ಪರಿಶೀಲನೆ ಕುರಿತು.

**ಓದಲಾಗಿದೆ:** ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 59 ಸೇನಿಡಿ 2002, ದಿನಾಂಕ: 23.9.2002.

**ಪ್ರಸ್ತಾವನೆ:-**

ಮೇಲೆ ಓದಲಾದ ಅಧಿಕೃತ ಜ್ಞಾಪನದಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಶೀಲಿಸಲು ಕಾರ್ಯವಿಧಾನವನ್ನು ನಿಗದಿಪಡಿಸಲಾಗಿತ್ತು. ಈ ಕಾರ್ಯವಿಧಾನವನ್ನು ಮಾರ್ಪಡಿಸುವ ಅವಶ್ಯಕತೆ ಕಂಡುಬಂದಿದೆ. ಅಂತೆಯೇ ಈ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಸೇನಿಡಿ 2004, ಬೆಂಗಳೂರು, ದಿನಾಂಕ: 8ನೇ ಅಕ್ಟೋಬರ್ 2004

ಮೇಲೆ ಓದಲಾದ ಅಧಿಕೃತ ಜ್ಞಾಪನವನ್ನು ರದ್ದುಗೊಳಿಸಿ, ವಿಷಯಕ್ಕೆ ಸಂಬಂಧಿಸಿದಂತೆ, ಕೆಳಕಂಡ ಸೂಚನೆಗಳನ್ನು ನೀಡಲಾಗಿದೆ.

1. ವಿವಿಧ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳ ರಚನೆ : ಪರಿಶೀಲನೆಯನ್ನು ಈ ಕೆಳಕಂಡವರನ್ನೊಳಗೊಂಡ ವೃಂದ ಪರಿಶೀಲನಾ ಸಮಿತಿಯು ಮಾಡತಕ್ಕದ್ದು:

 1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
 2) ಸಂಬಂಧಿಸಿದ ಇಲಾಖೆಯ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ
 3) ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ, ಆರ್ಥಿಕ ಇಲಾಖೆ
 4) ಸಂಬಂಧಿಸಿದ ಇಲಾಖೆಯ ಮುಖ್ಯಸ್ಥರು.

ವೃಂದ ಪರಿಶೀಲನಾ ಸಮಿತಿಯು ಇನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸದೇ ಇರುವ ಇಲಾಖೆಗಳು ಕೂಡಲೇ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಶೀಘ್ರವಾಗಿ ರಚಿಸುವ ರಚಿಸುವಂತಾಗಲು ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು, ಹಾಗೂ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಂಬಂಧಿಸಿದ ಇಲಾಖೆಗಳು ಕನಿಷ್ಟ ಮೂರು ವರ್ಷಗಳಿಗೊಮ್ಮೆ ಪರಿಶೀಲಿಸುವುದನ್ನು ಖಾತ್ರಿಪಡಿಸಿಕೊಳ್ಳತಕ್ಕದ್ದು.

2. ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಶೀಲಿಸುವಾಗ ಕೆಳಕಂಡ ಅಂಶಗಳನ್ನು ಗಮನದಲ್ಲಿರಿಸಬೇಕು:

 ಅ) ಇಲಾಖೆಯ ಜಾರಿಯಲ್ಲಿರುವ ನೇಮಕಾತಿ ನಿಯಮಗಳಲ್ಲಿ ಈಗಾಗಲೇ ನಿಗದಿಪಡಿಸಿದ ವಿದ್ಯಾರ್ಹತೆಯನ್ನು, ಶಿಕ್ಷಣ ಸಂಸ್ಥೆಗಳು ನೀಡುತ್ತಿರುವ ಹೊಸ ಪದವಿ, ಡಿಪ್ಲೊಮಾ ಮತ್ತು ಸರ್ಟಿಫಿಕೇಟ್‌ಗಳ ಹಿನ್ನೆಲೆಯಲ್ಲಿ ಮಾರ್ಪಡಿಸುವ : ಹೆಚ್ಚಿಸುವ ಅವಶ್ಯಕತೆಯಿದೆಯೇ;

 ಆ) ಇಲಾಖೆಯ ಸಾಮಾನ್ಯ ಬೆಳವಣಿಗೆ ಮತ್ತು ಇಲಾಖೆಯ ವಿವಿಧ ಅಭಿವೃದ್ಧಿ ಯೋಜನೆಗಳು : ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ದಿಸೆಯಲ್ಲಿ, ಮಾನವ ಸಂಪನ್ಮೂಲ ಸಾಕಷ್ಟಿರುವುದೇ;

 ಇ) ಇಲಾಖೆಯ ಈಗಿರುವ ಹುದ್ದೆಗಳ ಸಂಖ್ಯೆಯನ್ನು ಕಡಿಮೆಗೊಳಿಸಲು ಅವಕಾಶವಿದೆಯೇ;

 ಈ) ಇಲಾಖೆಯಲ್ಲಿ ನೇರ ನೇಮಕಾತಿಯು ನಿಗದಿತವಾಗಿ ನಡೆಯುತ್ತಿದೆಯೇ ಹಾಗೂ ಜಾರಿಯಲ್ಲಿರುವ ನೇರ ನೇಮಕಾತಿ ಪ್ರಮಾಣವು ಸಂಬಂಧಿಸಿದ ವೃಂದಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ನವಯುವಕರನ್ನು ನೇಮಕ ಮಾಡುವ ಉದ್ದೇಶವನ್ನು ಈಡೇರಿಸುವುದೇ;

 ಉ) ಇಲಾಖೆಯ ಯಾವುದಾದರೂ ವೃಂದದಲ್ಲಿ ಹತ್ತು ವರ್ಷಗಳಿಗೂ ಮಿಗಿಲಾಗಿ ಬಡ್ತಿ ಸಿಗದೆ, ಬಡ್ತಿ ಅವಕಾಶ ಸ್ಥಗಿತಗೊಂಡಿದೆಯೇ? ಹಾಗಿದ್ದಲ್ಲಿ ಇದನ್ನು ಕಡಿತಗೊಳಿಸಲು ಏನಾದರೂ ಹೊಂದಾಣಿಕೆ ಸಾಧ್ಯವೇ;

ಊ)ಇತರೆ ಇಲಾಖೆಗಳಲ್ಲಿ : ಸ್ವಾಯತ್ತ ಸಂಸ್ಥೆಗಳಲ್ಲಿ ನಿಯೋಜನೆ ಮೀಸಲು ಎಂದು ಹುದ್ದೆಗಳನ್ನು ಮಾಡುವ ಅವಶ್ಯಕತೆ ಇದೆಯೇ;

ಋ) ದಿನಾಂಕ: 1.4.2000 ರಂದು ಖಾಲಿ ಇದ್ದ ಹುದ್ದೆಗಳಲ್ಲಿ ಶೇ. 80 ರಷ್ಟನ್ನು ರದ್ದುಗೊಳಿಸುವ ಬಗ್ಗೆ ಇರುವ ಆದೇಶದ ಮೇಲೆ ತೆಗೆದುಕೊಂಡ ಕ್ರಮವನ್ನು ಸೂಕ್ತವಾಗಿ ಅಳವಡಿಸಬೇಕು.

3. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಶೀಲನೆ ಪ್ರಕ್ರಿಯೆ ಇಲಾಖಾ ಮುಖ್ಯಸ್ಥರಿಂದ ಪ್ರಾರಂಭವಾಗಬೇಕು. ಅವರು ಇಲಾಖೆಯ ಅವಶ್ಯಕತೆಗಳ ಬಗ್ಗೆ ವಿವರವಾಗಿ ಪರಿಶೀಲಿಸಬೇಕು ಹಾಗೂ ಈ ಕೆಳಕಂಡವರನ್ನೊಳಗೊಂಡ ಇಲಾಖಾ ಸಮಿತಿಯ ಪರಿಶೀಲನೆ ನಂತರ ಸೂಕ್ತ ಪ್ರಸ್ತಾವನೆಯನ್ನು ತಯಾರಿಸಬೇಕು.

1) ಇಲಾಖಾ ಮುಖ್ಯಸ್ಥರು
2) ಇಲಾಖಾ ಮುಖ್ಯಸ್ಥರು ನಾಮ ನಿರ್ದೇಶನ ಮಾಡುವ ಇಬ್ಬರು ಅಪರ : ಸಹ : ಉಪ ಇಲಾಖಾ ಮುಖ್ಯಸ್ಥರು : ಸದಸ್ಯರು. ಅಪರ : ಸಹ : ಉಪ ಇಲಾಖಾ ಮುಖ್ಯಸ್ಥರಾದ ಈ ಇಬ್ಬರು ಸದಸ್ಯರು ಇಲಾಖೆಯ ನಾಗರೀಕ ಸೇವೆಗಳು ವೃಂದಕ್ಕೆ ಸೇರಿದವರಾಗಿರಬೇಕು. ಇಲಾಖೆಯಲ್ಲಿ ನಿಯೋಜನೆಯ ಮೇಲೆ ಕೆಲಸ ಮಾಡುತ್ತಿರುವ ಇತರೇ ಇಲಾಖೆಗಳ : ಅನ್ಯ ಸೇವೆಯ ಅಧಿಕಾರಿಗಳನ್ನು ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಬಾರದು ಪ್ರಸ್ತಾವನೆಗಳನ್ನು ಪೂರ್ಣಗೊಳಿಸುವ ಮುನ್ನ ಅದನ್ನು ಇಲಾಖೆಯ ನೌಕರರ ಸಂಘದ ಪ್ರತಿನಿಧಿಗಳೊಂದಿಗೆ ಚರ್ಚಿಸಬೇಕು, ಹೀಗೆ ಅಂತಿಮಗೊಳಿಸಿದ ಪ್ರಸ್ತಾವನೆಯ 10 ಪ್ರತಿಗಳನ್ನು, ಈ ಆದೇಶಕ್ಕೆ ಲಗತ್ತಿಸಿದ ತಃಖ್ತೆ 1 - 9 ರಲ್ಲಿರುವ ಮಾಹಿತಿಯೊಡನೆ ಸಂಬಂಧಿಸಿದ ಆಡಳಿತ ಇಲಾಖೆಯ ಸಚಿವಾಲಯಕ್ಕೆ ಕಳುಹಿಸಬೇಕು. ಇತರೆ ಮಾಹಿತಿಗಳಿದ್ದಲ್ಲಿ ಅಥವಾ ಇಲಾಖೆಯ ಯಾವುದಾದರು ವಿಶೇಷ ತೊಂದರೆಗಳಿದ್ದಲ್ಲಿ, ಅದನ್ನು ಪೂರಕ ಮಾಹಿತಿಯೊಡನೆ ಇಲಾಖಾ ಮುಖ್ಯಸ್ಥರು ಪ್ರತ್ಯೇಕ ತಃಖ್ತೆಯಲ್ಲಿ ಲಗತ್ತಿಸಿ ಒದಗಿಸಬಹುದು. ಪ್ರಸ್ತಾವನೆಯು ಇಲಾಖೆಯಲ್ಲಿನ ಎಲ್ಲಾ ವೃಂದಗಳ ಅಂದರೆ ಗ್ರೂಪ್ - ಎ, ಬಿ, ಸಿ ಮತ್ತು ಡಿ ಹುದ್ದೆಗಳ ಕ್ರೋಢೀಕೃತ ಪ್ರಸ್ತಾವನೆ ಆಗಿರಬೇಕು.

4. ಸಚಿವಾಲಯದ ಆಡಳಿತ ಇಲಾಖೆಯು ಈ ಪ್ರಸ್ತಾವನೆಯನ್ನು ಪರಿಶೀಲಿಸಿ ತನ್ನ ಅಭಿಪ್ರಾಯದೊಂದಿಗೆ ಪ್ರತ್ಯೇಕವಾಗಿ ಪ್ರಸ್ತಾವನೆಗಳ ಒಂದು ಪ್ರತಿಯನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಆರ್ಥಿಕ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳಿಗೆ) ಅಭಿಪ್ರಾಯ : ಸಹಮತಿಗಾಗಿ ಕಳುಹಿಸಬೇಕು. ಈ ಇಲಾಖೆಗಳು ಪ್ರಸ್ತಾವಗಳನ್ನು ಪರಿಶೀಲಿಸಿ ತಮ್ಮ ಅಭಿಪ್ರಾಯಗಳನ್ನು ಒಂದು ತಿಂಗಳೊಳಗೆ ಆಡಳಿತ ಇಲಾಖೆಗಳಿಗೆ ತಿಳಿಸಬೇಕು. ಅವುಗಳ ಅಭಿಪ್ರಾಯವನ್ನು ಸ್ವೀಕರಿಸಿದ ನಂತರ ಆಡಳಿತ ಇಲಾಖೆಯ ಕಾರ್ಯದರ್ಶಿಯು ಈ ವಿಷಯವನ್ನು ವಿವರವಾಗಿ ಸಮಾಲೋಚಿಸುವುದಕ್ಕಾಗಿ ವೃಂದ ಪರಿಶೀಲನಾ ಸಮಿತಿಯ ಉಪಸಮಿತಿಯ ಸಭೆಯಲ್ಲಿ ಮಂಡಿಸಬೇಕು. ಈ ಉಪಸಮಿತಿಯು ಈ ಕೆಳಕಂಡವರನ್ನು ಒಳಗೊಂಡಿರುತ್ತದೆ:

(1) ಸಂಬಂಧಿಸಿದ ಆಡಳಿತ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ
(2) ಇಲಾಖಾ ಮುಖ್ಯಸ್ಥರು
(3) ಆರ್ಥಿಕ ಇಲಾಖೆ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮ) ಗಳ ಪ್ರತಿನಿಧಿಗಳು

ಒಪ್ಪಿದ ಪ್ರಸ್ತಾವನೆಗಳ ಹಾಗೂ ಪರಾಮರ್ಶಿಸುವ ಇಲಾಖೆಗಳ ಅಭಿಪ್ರಾಯ ಹಾಗೂ ಭಿನ್ನಾಭಿಪ್ರಾಯಗಳನ್ನು (ಇದ್ದಲ್ಲಿ) ಸೂಚಿಸುವ ವಿವರವಾದ ನಡವಳಿಗಳನ್ನು ಸಿದ್ಧಪಡಿಸಬೇಕು.

5. ಆಡಳಿತ ಇಲಾಖೆಯು ಪ್ರಸ್ತಾಪಿಸಿರುವ ವೃಂದ ಮತ್ತು ನೇಮಕಾತಿ ನಿಯಮಗಳ ಕರಡು ಪ್ರತಿಗಳನ್ನು ವೃಂದ ಪರಿಶೀಲನಾ ಸಮಿತಿಯ ಸದಸ್ಯರ ಪರಿಗಣನೆಗಾಗಿ ಎರಡು ವಾರಗಳ ಮುಂಚಿತವಾಗಿ ಕಳುಹಿಸಬೇಕು. ಹೀಗೆ ಕಳುಹಿಸುವಾಗ ಸಮಾಲೋಚಿಸಿದ ಇಲಾಖೆಗಳ ಪ್ರತಿನಿಧಿಗಳು ಉಪಸಮಿತಿಯಲ್ಲಿ ವ್ಯಕ್ತಪಡಿಸಿರುವ ಭಿನ್ನಾಭಿಪ್ರಾಯಗಳನ್ನು ಕಳುಹಿಸಬೇಕು. ವೃಂದ ಪರಿಶೀಲನಾ ಸಮಿತಿ ಸದಸ್ಯರಿಗೆ ಕಳುಹಿಸಿದ ಕಾಗದ ಪತ್ರಗಳ ಪ್ರತಿಗಳನ್ನು ಮಾಹಿತಿಗಾಗಿ ಸಂಬಂಧಪಟ್ಟ ಸಮಾಲೋಚನಾ ಇಲಾಖೆಗಳಿಗೆ ಏಕಕಾಲದಲ್ಲಿ ಒದಗಿಸಬೇಕು.

6. ವೃಂದ ಪರಿಶೀಲನಾ ಸಮಿತಿಯು ವೃಂದ ಮತ್ತು ನೇಮಕಾತಿ ನಿಯಮಗಳ ಕರಡನ್ನು ಸಭೆಯಲ್ಲಿ ಪರಿಶೀಲಿಸುವುದು ಮತ್ತು ಅಂತಿಮಗೊಳಿಸುವುದು, ವೃಂದ ಪರಿಶೀಲನಾ ಸಮಿತಿಯು ಒಪ್ಪಿಕೊಂಡ ಪ್ರಸ್ತಾವನೆಯು ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದಿದೆ ಎಂದು ಭಾವಿಸತಕ್ಕದ್ದು, ವೃಂದ ಪರಿಶೀಲನಾ ಸಮಿತಿಯು ಅನುಮೋದಿಸಿರುವ ವೃಂದ ಮತ್ತು ನೇಮಕಾತಿ ನಿಯಮಗಳ ಕರಡನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಿಂದ ಪರಿಶೋಧಿಸಿಕೊಳ್ಳಬೇಕು. ಆಡಳಿತ ಇಲಾಖೆಯು ಈ ನಿಯಮಗಳಿಗೆ ಸಚಿವ ಸಂಪುಟದ ಒಪ್ಪಿಗೆಯನ್ನು ಪಡೆದ ನಂತರ ಕರಡು ನಿಯಮಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಬೇಕು.

7. ಪ್ರಕಟಿತ ಕರಡು ನಿಯಮಗಳಿಗೆ ಆಡಳಿತ ಇಲಾಖೆಯು ಆಕ್ಷೇಪಣೆ : ಸಲಹೆಗಳನ್ನು ಸ್ವೀಕರಿಸಿದಲ್ಲಿ ಹಾಗೂ ಅದನ್ನು ಒಪ್ಪಿಕೊಂಡು ಅದರಂತೆ ಕರಡು ನಿಯಮಗಳನ್ನು ತಿದ್ದುಪಡಿ ಮಾಡಲು ಇಚ್ಛಿಸಿದಲ್ಲಿ ಈ ತಿದ್ದುಪಡಿಗೆ ವೃಂದ ಪರಿಶೀಲನಾ ಸಮಿತಿಯ ಅನುಮೋದನೆ ಪಡೆದು ನಂತರ ಕರಡು ನಿಯಮಗಳನ್ನು ಅಂತಿಮ ನಿಯಮಗಳೆಂದು ಪ್ರಕಟಿಸಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ-3,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು).

**ತಃಖ್ತೆ - 1**

**ಚಾಲ್ತಿಯಲ್ಲಿರುವ : ಪ್ರಸ್ತಾಪಿತ ಹುದ್ದೆಗಳ ವಿವರ** ಇಲಾಖೆ:

| | ಚಾಲ್ತಿಯಲ್ಲಿರುವ ಹುದ್ದೆಗಳು | | | ಪ್ರಸ್ತಾಪಿತ ಹುದ್ದೆಗಳು | | | ಸೇರಿಸುವುದು: | ಷರಾ |
|---|---|---|---|---|---|---|---|---|
| ಕ್ರ. ಸಂ. | ಪದನಾಮ | ವೇತನ ಶ್ರೇಣಿ | ಸಂಖ್ಯೆ | ಪದನಾಮ | ವೇತನ ಶ್ರೇಣಿ | ಸಂಖ್ಯೆ | ಕಡಿತಗೊಳಿಸುವುದು | |
| 1 | 2 | 3 | 4 | 5 | 6 | 7 | 8 | 9 |
| | | | | | | | | |

**ತಃಖ್ತೆ - 2**

**ಹುದ್ದೆಗಳ ಸೃಜನೆ : ರದ್ಧತಿ : ಮೇಲ್ದರ್ಜೆಗೇರಿಸುವುದು : ಕೆಳದರ್ಜೆಗಿಳಿಸುವುದು : ಮರು ಪದನಾಮೀಕರಿಸುವ ಪ್ರಸ್ತಾವನೆಗಳ ವಿವರ**

ಇಲಾಖೆ:

| ಕ್ರ.ಸಂ. | ಹುದ್ದೆಯ ಪದನಾಮ | ಪ್ರಸ್ತಾವನೆ | ಪ್ರಸ್ತಾವನೆಗೆ ಸಮರ್ಥನೆ |
|---|---|---|---|
| 1 | 2 | 3 | 4 |
| | | | |

**ತಃಖ್ತೆ - 3**

**ಇಲಾಖೆಯಲ್ಲಿ ಸೃಜಿಸಿದ ಹುದ್ದೆಗಳು, ಆದರೆ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರದೆ ಇರುವ ಹುದ್ದೆಗಳ ವಿವರ:**

(1ನೇ ಏಪ್ರಿಲ್ ................ ರಂದು ಇದ್ದಂತೆ) ಇಲಾಖೆ:

| ಕ್ರ. ಸಂ. | ಹುದ್ದೆಯ ಪದನಾಮ | ಸಂಖ್ಯೆ | ವೇತನ ಶ್ರೇಣಿ | ಸೃಜನೆ ಮಾಡಿದ ದಿನಾಂಕ | ಸೃಜನೆ ಮುಂದುವರೆಸಿದ ದಿನಾಂಕ | ಸೃಜನೆ : ಮುಂದುವರಿಕೆ ಯನ್ನು ಅನುಮೋದಿಸಿದ ಸರ್ಕಾರಿ ಆದೇಶದ ಸಂಖ್ಯೆ ಮತ್ತು ದಿನಾಂಕ | ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರ್ಪಡೆಯಾಗಲು ಈಗ ಪ್ರಸ್ತಾಪಿಸಲಾಗಿದೆಯೇ? ಇಲ್ಲದಿದ್ದರೆ, ಏಕೆ? |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |

**ತಃಖ್ತೆ - 4**

**ವಿದೇಶೀ ಸೇವೆಯ ಹುದ್ದೆಗಳನ್ನು ಹೊರತುಪಡಿಸಿ ಇತರ ಹುದ್ದೆಗಳಿಗೆ ಇಲಾಖೆಯ ಅಧಿಕಾರಿಗಳನ್ನು ನಿಯೋಜನೆಯ ಮೇಲೆ ನೇಮಕಾತಿ ಮಾಡಿರುವ ವಿವರ**

(1ನೇ ಏಪ್ರಿಲ್ ............... ರಂದು ಇದ್ದಂತೆ) ಇಲಾಖೆ:

| ಕ್ರ. ಸಂ. | ಹುದ್ದೆಯ ಪದನಾಮ ಮತ್ತು ಇಲಾಖೆ | ವೇತನ ಶ್ರೇಣಿ | ಎರವಲು ಮೇಲಿನ ಅಧಿಕಾರಿಗಳು ಈ ಹುದ್ದೆಯಲ್ಲಿ ನಿರಂತರವಾಗಿ ಸೇವೆ ಸಲ್ಲಿಸಿದ ಕಾಲಾವಧಿ | ಎರವಲು ಕೊಟ್ಟ ಇಲಾಖೆ ಈ ಹುದ್ದೆಯನ್ನೇಕೆ ಸಂವರ್ಗೀಕೃತ (encadre) ಗೊಳಿಸಬೇಕು | ಎರವಲು ಪಡೆದ ಇಲಾಖೆಯು ಎರವಲು ಕೊಟ್ಟ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಈ ಹುದ್ದೆಯನ್ನು ಸಂವರ್ಗೀಕೃತ ಗೊಳಿಸಲು ಒಪ್ಪುವುದೇ ಇಲ್ಲದಿದ್ದರೆ, ಏಕೆ? |
|---|---|---|---|---|---|
| 1 | 2 | 3 | 4 | 5 | 6 |
| | | | | | |

**ತಃಖ್ತೆ - 5**

**ಇಲಾಖೆಯಲ್ಲಿ ಆರು ತಿಂಗಳಿಗಿಂತ ಹೆಚ್ಚು ಕಾಲ ಖಾಲಿ ಇರುವ ಹುದ್ದೆಗಳ ವಿವರ:**

(1ನೇ ಏಪ್ರಿಲ್ ......................... ರಂದು ಇದ್ದಂತೆ) ಇಲಾಖೆ:

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಯು ಖಾಲಿಯಾದ ದಿನಾಂಕ | ಹುದ್ದೆಯನ್ನು ಎಲ್ಲಿಯವರೆಗೆ ಖಾಲಿಯಾಗಿಡಲು ನಿರೀಕ್ಷಿಸಿದ ದಿನಾಂಕ | ಹುದ್ದೆಯನ್ನು ಖಾಲಿ ಬಿಟ್ಟಿರುವುದಕ್ಕೆ ಕಾರಣಗಳು |
|---|---|---|---|---|
| 1 | 2 | 3 | 4 | 5 |
| | | | | |

**ತಃಖ್ತೆ - 6**

**ಕರ್ನಾಟಕ ಸರ್ಕಾರದ ಇತರ ಇಲಾಖೆಗಳಲ್ಲಿರುವ ಹುದ್ದೆಗಳನ್ನು ಹೊರತುಪಡಿಸಿ, ವಿದೇಶೀ ಸೇವೆಯ ಅಂದರೆ ಸ್ವಾಯತ್ತ ಮತ್ತು ಖಾಸಗಿ ಸಂಸ್ಥೆ, ಕೇಂದ್ರ ಸರ್ಕಾರ ಮತ್ತು ಇತರ ರಾಜ್ಯ ಸರ್ಕಾರದ ಹುದ್ದೆಗಳ ವಿವರವನ್ನು ತೋರಿಸುವ ತಃಖ್ತೆ:**

| ಕ್ರ.ಸಂ. | ಹುದ್ದೆ | ಹುದ್ದೆಯನ್ನು ಧಾರಣೆ ಮಾಡಿದ ಅಧಿಕಾರಿಯ ವೇತನ ಶ್ರೇಣಿ (ಕರ್ನಾಟಕ ರಾಜ್ಯದ ಸೇವೆಯಲ್ಲಿ) | ಅಂಕಣ 2 ರಲ್ಲಿರುವ ಹುದ್ದೆಯಲ್ಲಿ ನಿರಂತರವಾಗಿ ನಿಯೋಜನೆಯಲ್ಲಿರುವ ದಿನಾಂಕ | ಮಾತೃ ಇಲಾಖೆಯ ಹೊರಗೆ ಅಧಿಕಾರಿಯು ನಿರಂತರವಾಗಿ ನಿಯೋಜನೆಯಲ್ಲಿ ಮುಂದುವರೆದ ದಿನಾಂಕ |
|---|---|---|---|---|
| 1 | 2 | 3 | 4 | 5 |
| | | | | |

**ತಃಖ್ತೆ - 7**

**ಚಾಲ್ತಿಯಲ್ಲಿರುವ : ಪ್ರಸ್ತಾಪಿಸಿದ ವೃಂದ ಮತ್ತು ನೇಮಕಾತಿ ನಿಯಮಗಳ ವಿವರ:**

ಇಲಾಖೆ:

| ಕ್ರ. ಸಂ. | ಹುದ್ದೆಗಳು | | | ಚಾಲ್ತಿಯಲ್ಲಿರುವ ನೇಮಕಾತಿ ವಿಧಾನ | ಪ್ರಸ್ತಾಪಿಸಿದ ನೇಮಕಾತಿ ವಿಧಾನ | ಚಾಲ್ತಿಯಲ್ಲಿರುವ ನಿಯಮಗಳಲ್ಲಿ ನಿಗದಿತ ಕನಿಷ್ಟ ವಿದ್ಯಾರ್ಹತೆ | ಈಗ ಪ್ರಸ್ತಾಪಿಸಿದ ಕನಿಷ್ಟ ವಿದ್ಯಾರ್ಹತೆ | ಬದಲಾವಣೆಗೆ ಕಾರಣಗಳು |
|---|---|---|---|---|---|---|---|---|
| | ಪದನಾಮ | ವೇತನ ಶ್ರೇಣಿಗಳು | ಹುದ್ದೆಗಳ ಸಂಖ್ಯೆ | | | | | |
| 1 | 2 | 3 | 4 | 5 | 6 | 7 | 8 | 9 |
| | | | | | | | | |

**ತಃಖ್ತೆ - 8**

**ಮುಂದಿನ ಮೂರು ವರ್ಷಗಳಿಗೆ ಎದುರಾಗಿ ಪ್ರಸ್ತಾಪಿಸಿರುವ ನೇರ ನೇಮಕಾತಿಯನ್ನು ತೋರಿಸುವ ವಿವರ:**

ಇಲಾಖೆ:

| ಕ್ರ. ಸಂ. | ಹುದ್ದೆಗಳು | ನೇರ ನೇಮಕಾತಿಯಿಂದ ಭರ್ತಿ ಮಾಡಬೇಕಾದ ಹಾಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ | ಚಾಲ್ತಿ ವರ್ಷದಲ್ಲಿ ಉದ್ಭವವಾಗಲಿರುವ ನೇರ ನೇಮಕಾತಿಯಿಂದ ಭರ್ತಿ ಮಾಡಬೇಕಾದ ಹುದ್ದೆಗಳ ಸಂಖ್ಯೆ | | | ಅಂಕಣ 2, 3, 4 ಮತ್ತು 5ರ ಮೊತ್ತ | ಮುಂದಿನ ಮೂರು ವರ್ಷಗಳಿಗೆ ಉದ್ದೇಶಿತ ವಾರ್ಷಿಕ ಸೇರ್ಪಡೆ |
|---|---|---|---|---|---|---|---|
| | | | 2004 | 200 | 200 | | |
| 1 | 2 | 3 | 4 | 5 | 6 | 7 | 8 |
| | | | | | | | |

**ತಃಖ್ತೆ - 9**

**ಮುಂಬಡ್ತಿಗಾಗಿ ಚಾಲ್ತಿಯಲ್ಲಿರುವ ಆಸ್ಪದವನ್ನು ತೋರಿಸುವ ತಃಖ್ತೆ**

ಇಲಾಖೆ:

| ಕ್ರ. ಸಂ. | ಹುದ್ದೆಗಳ ವರ್ಗ | ವೇತನ ಶ್ರೇಣಿ | ಮಂಜೂರಾದ ಹುದ್ದೆಗಳ ಸಂಖ್ಯೆ | ವಾಸ್ತವಿಕವಾಗಿ ಖಾಲಿ ಇರುವ ಹುದ್ದೆಗಳ ಸಂಖ್ಯೆ | ಮುಂದಿನ ಮೂರು ವರ್ಷಗಳಲ್ಲಿ ಉದ್ಭವವಾಗಲಿರುವ ಖಾಲಿ ಹುದ್ದೆಗಳ ಸಂಖ್ಯೆ | ಅಂಕಣ 5 ಮತ್ತು 6ರ ಮೊತ್ತ | ಅಂಕಣ 2 ರಲ್ಲಿನ ಹುದ್ದೆಗೆ ಬಡ್ತಿಗಾಗಿ ಕಾದಿರುವ (ಈ ಮುಂಚೆ ಪರಿಗಣಿಸಿ ಕೈಬಿಟ್ಟು ಪ್ರಕರಣಗಳನ್ನು ಹೊರತುಪಡಿಸಿ) ಸೇವಾ ಹಿರಿತನದಲ್ಲಿರುವ ಮೂರು ಅಧಿಕಾರಿಗಳು ಪೋಷಕ ವೃಂದದಲ್ಲಿ ಸಲ್ಲಿಸಿರುವ ಸೇವಾ ಅವಧಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |

## PERSONNEL AND ADMINISTRATIVE REFORMS SECRETARIAT

**Sub:** Cadre and Recruitment Rules-Review of

**Read:** O.M.No. DPAR 59 SRD 2002 dated 23.09.2002.

**Preamble:**

In the OM read above a procedure for reviewing the Cadre and Recruitment Rules has been laid down. It is found that this procedure requires to be modified. Hence this order.

**Government order No. DPAR 97 SRD 2004, Bangalore, dated 8th October 2004**

In supersession of the OM read above, the following instructions are issued in the matter.

1. The framing/review of the Cadre and Recruitment Rules of various departments shall be done by a Cadre Review Committee consisting of the following:

   1. Additional Chief Secretary to Government.
   2. Principal Secretary /Secretary to Government of the Administrative Department concerned.
   3. Principal Secretary /Secretary to Government, Finance Department.
   4. The Head of Department concerned.

The Cadre Review Committee shall ensure that Cadre and Recruitment Rules are framed expeditiously in respect of such of the departments which do not have C&R Rules at present.It shall also ensure that the existing Cadre and Recruitment Rules are reviewed at least once in three years.

2. While reviewing the Cadre and Recruitment Rules the following points may be kept in view:-

[I] Whether the qualifications already prescribed in the existing rules of recruitment should be modified and updated in view of the new Degrees, Diplomas and Certificates being awarded by the educational institutions.

[II] Whether the manpower requirement of the department is adequately met by the existing [sanctioned] posts in keeping with the normal growth pattern and the implementation of various developmental plans and programmes;

[III] Whether there is scope to reduce the number of posts;

[IV] Whether the existing quota of direct recruitment ensures adequate infusion of fresh blood in the cadres concerned and whether direct recruitment is taking place regularly;

[V] Whether there is stagnation of over ten years without promotion in any cadre and if so any adjustments are possible to minimize such stagnation; and

[VI] Whether there is need to encadre as deputation reserve, posts in other departments/ autonomous bodies.

[VII] The action taken on the orders regarding the abolition of 80% of the vacant posts existing as on 1st April 2000 should be suitably incorporated.

3. The process of review of the Cadre and Recruitment Rules should be initiated by the Heads of Departments. They should make a detailed study of the requirements of the Department and formulate the proposals after scrutiny by a Departmental Committee, consisting of the following:

[a] Head of Department
[b] Two members from the cadre of Addl/Joint/ Deputy Heads of Department nominated by the Head of Department.

The two members from the category of Addl/Joint/Deputy Heads of Department should be drawn from the State Civil Service cadres of the department . Officers working in the department on deputation from any other department or service should not be nominated. Before finalizing its proposals, the Committee should normally discuss with the representatives of the departmental employees associations. The proposals thus finalised should be sent in ten sets by the Head of Department to the Administrative Department of Secretariat with all the details in the Forms I to IX enclosed to this G.O. The Head of Department may also furnish any other relevant details in a separate statement to explain the special problems of his department in support of his proposals. A consolidated proposal should be sent in respect of all the Cadres, i.e. all the posts in Group A,B,C and D.

4. The Administrative Department of Secretariat should scrutinize the proposal and send with its views, one set of proposals each to Department of Parliamentary Affairs and Legislation, Finance Department and DPAR[Service Rules] simultaneously for comments/concurrence. The consulting departments should examine the proposals and communicate their views to the administrative department within one month. The Secretary in the administrative department should; on receipt of the comments of the Department of Parliamentary Affairs and Legislation, Finance Department and the DPAR[Service Rules] place the matter for consideration in detail in a meeting of a Sub-Committee of the Cadre Review Committee consisting of the following:-

[1] Principal Secretary / Secretary to Government of the Administrative Department
[2] Head of Department
[3] Representatives of Departments of Finance, DPAR [Service Rules] and Department of Parliamentary Affairs and Legislation.

Detailed proceedings will be drawn up indicating agreed proposals as also the differing views of any of the representatives of consulting departments.

5. The Administrative Department shall circulate thereafter the draft of the cadre and recruitment rules which it proposes to adopt, for consideration by the Cadre Review Committee. In doing so, the differing views if any, of the representatives of the Consulting Departments in the Sub-Committee should also be circulated atleast two weeks in advance. Copies of all the material circulated to the members of the Cadre Review Committee should also be endorsed simultaneously to the concerned consulting Departments for information..

6. The Cadre Review Committee shall consider the drafts of the Cadre and Recruitment Rules in a meeting and finalise the proposals. The proposals accepted by the Cadre Review Committee shall be deemed to have received the assent of the Finance Department .The draft Cadre and Recruitment Rules as approved by the Cadre Review Committee should be got scrutinized from the Department of Parliamentary Affairs and Legislation. The administrative department should obtain the approval of Cabinet for the draft Rules and thereafter publish the draft Rules in the official Gazette.

7. In case of objections; suggestions are received and the administrative department proposes to accept them and modify the draft rules accordingly, it should seek clearance of Cadre Review Committee and thereafter it should take action to publish the draft rules as final rules.

By order and in the name of Governor of Karnataka
**G.Nagaraju**
Under Secretary to Government-3,
Department of Personnel and Administrative Reforms. [Service Rules].

**STATEMENT - I**

**Statement showing the existing / proposed posts**

Department:

| Sl. No. | Existing Posts | | | Proposed Posts | | | Additions (+) Deletions (-) | Remarks |
|---|---|---|---|---|---|---|---|---|
| | Designation | Pay Scale Rs. | No. | Designation | Pay Scale Rs. | No. | | |
| 1 | 2 | 3 | 4 | 5 | 6 | 7 | 8 | 9 |
| | | | | | | | | |

**STATEMENT - II**

Statement explaining proposals for Creation / Abolition / Upgradation / Downgradation / Re-Designation

| Sl.No. | Designation of the post | Proposal | Justification for the proposal |
|---|---|---|---|
| 1 | 2 | 3 | 4 |
| | | | |

**STATEMENT - III**

Department:

**Posts created in the Department but not already included in the C & R Rules**

(As on 1st April.............)

| Sl. No. | Designation of Post | No. of posts | Scale of Pay | Date of Creation | Date upto which created/ continued | No. & date of Govt. Order approving the creation/ continuance | Whether proposed now for inclusion in the C & R Rules. If not Why? |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |

**STATEMENT - IV**

Department:

**Posts other than foreign services posts to which officers of the department have been appointed, on deputation**

(As on 1st April............)

| Sl. No. | Designation of the post and the Department | Scale of Pay | The period of which this post is continuously held by borrowed Officers | Whether/Why this post should not be encadred by the lending Department | Whether the borrowing Dept. is agreable to encadreing the post in the C&R Rules of lending Dept. If not why? |
|---|---|---|---|---|---|
| 1 | 2 | 3 | 4 | 5 | 6 |
| | | | | | |

**STATEMENT - V**

Department:

**Posts which have remained vacant in the Department for Six Months or more**

(As on 1st April .................)

| Sl.No. | Designation of the Post | Date on which the Post has fallen vacant | Date upto which the post is expected to be kept vacant | Reasons for the post being vacant |
|---|---|---|---|---|
| 1 | 2 | 3 | 4 | 5 |
| | | | | |

**STATEMENT - VI**

**Statement showing the foreign service posts i.e. posts in autonomous and private organisations, Central and other State Government posts but excluding in other Departments of Government of Karnataka**

| Sl.No. | Post | Scale of Pay of the Officer (Under the State Government) who is holding the post | Date of continuous deputation in the post mentioned in Col.2 | Date of continuous deputation of the officer mentioned in column 3 outside the parent department |
|---|---|---|---|---|
| 1 | 2 | 3 | 4 | 5 |
| | | | | |

**STATEMENT - VII**

**Statement showing the Existing/Proposed C & R Rules**

Department:

| Sl. No. | Posts | | | Existing Method of Recruit-ment | Proposed Method of Recruit-ment | Minimum Qualification prescribed as per rules already issued | Minimum quali-fication now proposal | Reasons for change |
|---|---|---|---|---|---|---|---|---|
| | Designation | Pay Scales | No. of Posts | | | | | |
| 1 | 2 | 3 | 4 | 5 | 6 | 7 | 8 | 9 |
| | | | | | | | | |

**STATEMENT - VIII**

**Statement showing the proposed recruitment against Direct Recruitment quota during the next three years**

Department:

| Sl. No. | Posts | No. of Direct recruit vacancies already existing | No. of Direct recruit vacancies likely to arise during the year | | | Total of Columns 2, 3, 4 & 5 | Proposed annual intake during the next three years |
|---|---|---|---|---|---|---|---|
| | | | 1980 | 198 | 19 | | |
| 1 | 2 | 3 | 4 | 5 | 6 | 7 | 8 |
| | | | | | | | |

**STATEMENT - IX**
**Statement showing the existing scopse for promotions**

Department:

| Sl. No. | Category of Posts | Scale of pay | No. of sanctioned Posts | No. of existing vacancies | No. of vacancies likely to arise during the next three years | Total of Col. 5 & 6 | Length of service (in the existing grade) of the seniormost three officers in the feeder cadre awaiting promotion (but not already considered earlier and overlooked) to the category of posts mentioned in col. 2 |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |

**G. Nagaraju**

PR-1289

Under Secretary to Government-3,
Department of Personnel and Administrative Reforms (Service Rules)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) - ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ ಹುದ್ದೆ ಎಂದು ಮರು ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 607 ಎಸ್‌ಎಎಸ್ 2004, ದಿನಾಂಕ: 26.10.2004.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 26.10.2004ರ ಅಧಿಸೂಚನೆಯಲ್ಲಿ ಶ್ರೀ ಟಿ.ಎಂ. ವಿಜಯಭಾಸ್ಕರ್, ಐ.ಎ.ಎಸ್. ಇವರನ್ನು ಶಿಕ್ಷಣ ಇಲಾಖೆಯಲ್ಲಿ ನಿರ್ಮ್ಮೀಕರಿಸಲಾದ ಸರ್ಕಾರದ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಈ ಕಾರಣದಿಂದಾಗಿ ಪ್ರಸ್ತುತ ಶಿಕ್ಷಣ ಇಲಾಖೆಯಲ್ಲಿ ಅಸ್ಥಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಎಂದು ಮರು ಪದನಾಮೀಕರಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 91 ಸಸಿವಿ 2004, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಶಿಕ್ಷಣ ಇಲಾಖೆಯಲ್ಲಿ ಪ್ರಸ್ತುತ ಅಸ್ಥಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಹುದ್ದೆಯಲ್ಲಿ ಶ್ರೀ ಟಿ.ಎಂ. ವಿಜಯಭಾಸ್ಕರ್, ಐ.ಎ.ಎಸ್. ಇವರನ್ನು ನೇಮಿಸಿರುವುದರಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಹುದ್ದೆ ಎಂದು ಮರು ಪದನಾಮೀಕರಿಸಲಾಗಿದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರಲ್ಲಿ ಕಾರ್ಯದರ್ಶಿಗಳ ಆಪ್ತ ಶಾಖೆಗೆ ನಿಗದಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1293

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 24.3.2004 ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ನಡವಳಿಗಳು.
2) ದಿನಾಂಕ: 21.8.2004 ರಂದು ನಡೆದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ನಡವಳಿಗಳು.
3) ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 20.9.2004 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:-**

ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ತಾಂತ್ರಿಕ ಸೇವೆಗಳು, ಯು.ಪಿ.ಎಸ್.ಗಳು. ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ಹಾಗೂ ತರಬೇತಿ ನೀಡುವುದಕ್ಕೆ ನಾನಾ ಸಂಸ್ಥೆಗಳು ನಮೂದಿತ ಪಟ್ಟಿಯಲ್ಲಿ ತಮ್ಮ ಹೆಸರನ್ನು ಸೇರಿಸುವಂತೆ ಸರ್ಕಾರವನ್ನು ಕೋರಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಈ ಅರ್ಜಿಗಳನ್ನು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಡಾ: ಡಿ.ಕೆ. ಸುಬ್ರಮಣ್ಯ ಇವರ ಅಧ್ಯಕ್ಷತೆಯಲ್ಲಿ ನಡೆದ ತಾಂತ್ರಿಕ ಸಲಹಾ ಸಮಿತಿಯ ಉಪಸಮಿತಿಯ ಸಭೆಗಳಲ್ಲಿ ಸೂಕ್ಷ್ಮವಾಗಿ ಪರಿಶೀಲಿಸಲ್ಪಟ್ಟು, ಸದರಿ ಉಪಸಮಿತಿಯ ಶಿಫಾರಸ್ಸುಗಳ ಮೇರೆಗೆ, ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ತಾಂತ್ರಿಕ ಸಲಹಾ ಸಮಿತಿಯಿಂದ ಮಾರಾಟಗಾರರ ನಮೂದಿತ ಪಟ್ಟಿಯು ಅನುಮೋದಿಸಲ್ಪಟ್ಟಿರುತ್ತದೆ. ಈ ಬಗ್ಗೆ ಕೆಳಕಾಣಿಸಿದಂತೆ ಸರ್ಕಾರದ ಆದೇಶವನ್ನು ಪ್ರಸ್ತಾಪಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 78 ಇಆಇ 2004, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2004**

ರಾಜ್ಯದಲ್ಲಿನ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಉಪಕರಣಗಳು, ತಾಂತ್ರಿಕ ಸೇವೆಗಳು, ಯು.ಪಿ.ಎಸ್.ಗಳು ವಿವಿಧ ತಂತ್ರಾಂಶಗಳನ್ನು ಪೂರೈಸುವುದಕ್ಕಾಗಿ ಹಾಗೂ ತರಬೇತಿ ನೀಡುವುದಕ್ಕಾಗಿ ಕೆಳಕಂಡ

ಸಂಸ್ಥೆಗಳನ್ನು ಅವರ ಹೆಸರಿನ ಮುಂದೆ ನಮೂದಿಸಿದ ವರ್ಗದಲ್ಲಿ ಅಧಿಕೃತ ಮಾರಾಟಗಾರರೆಂದು ನಮೂದಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| Sl.No. | Name of the Vendor | Category |
|---|---|---|
| 1 | Lipi Data Systems Ltd.<br>#21, III Floor, Lakshmi Building,<br>Mission Road, Bangalore-560 027.<br>Phone No. 22272954/55 Fax-22277444<br>Contact Person-S. Ramaswamy<br>e-mail:ramaswamy@lipidata.com | Peripherals-additional items viz., High Speed Dot Matrix Printers and Laser printers |
| 2 | Comat Technologies (P) Limited<br>Comat House, 602/A, 18th Cross,<br>Sadashivanagar Bangalore-560 080<br>Phone No. 23618951/2 Fax-23611151<br>Contact Person-M.K. Ravindra<br>e-mail:ravindra.mk@comat.com | Software Developer-Minor |
| 3 | Circutek<br>"Swarnagiri" No. 140, 2nd Main,<br>2nd Cross, Domlur, 2nd Stage, Bangalore-560 071<br>Phone No. 25356018 Fax-25356018<br>Contact Person-Sheldon R. Manuel<br>e-mail:sheldon@circutek.com | Maintenance-For Bangalore only |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1295

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ, ಇ-ಆಡಳಿತ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆ.ಸು)

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ತಾತಗುಣಿ ಎಸ್ಟೇಟಿನಲ್ಲಿರುವ ರೋರಿಕ್ ದಂಪತಿಗಳ ಸ್ಮಾರಕದ ವಾರ್ಷಿಕ ನಿರ್ವಹಣೆ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರ ಪತ್ರ ಸಂಖ್ಯೆ: ಆಪ್ರಾಸಂಪ: ರೋರಿಕ್: 2004-05, ದಿನಾಂಕ: 5.8.2004.

**ಪ್ರಸ್ತಾವನೆ:-**

ಮೇಲೆ ಓದಲಾದ ದಿನಾಂಕ: 5.8.2004ರ ಪತ್ರದಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರವರು ಬೆಂಗಳೂರಿನ ತಾತಗುಣಿ ಎಸ್ಟೇಟಿನಲ್ಲಿರುವ ರೋರಿಕ್ ದಂಪತಿಗಳ ಸ್ಮಾರಕದ ವಾರ್ಷಿಕ ನಿರ್ವಹಣೆಯನ್ನು 2004-05ರ ಅನುದಾನದಲ್ಲಿ ನಿರ್ವಹಿಸಬೇಕೆಂದು ಮಾನ್ಯ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಿದ್ದು, ಅಕ್ಟೋಬರ್ 2004 ರಂದು ನಡೆಸಬೇಕೆಂದು ಉದ್ದೇಶಿಸಿರುವ, ರೋರಿಕ್ ದಂಪತಿಗಳ ಶತಮಾನೋತ್ಸವ ಸಮಾರಂಭಕ್ಕೆ, ಅವರು ವಾಸಿಸುತ್ತಿದ್ದ ಮನೆ, ಸ್ಮಾರಕ, ಉದ್ಯಾನವನ ಇವುಗಳ ನಿರ್ವಹಣೆಗಾಗಿ, ಇದೊಂದು ವಿಶೇಷ ಸಂದರ್ಭವೆಂದು ಪರಿಗಣಿಸಿ ಪರಂಪರೆ ಇಲಾಖೆಯ ಲೆಕ್ಕ ಶೀರ್ಷಿಕೆಯಡಿಯಲ್ಲಿ 2.00 ಲಕ್ಷ ರೂ.ಗಳ ಅನುದಾನವನ್ನು ನಿಗದಿಪಡಿಸಿಕೊಳ್ಳಲು ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 172 ಕೆಎಂಯು 2004, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಅಕ್ಟೋಬರ್ 2004 ರಲ್ಲಿ ಆಚರಿಸಲು ಉದ್ದೇಶಿಸಿರುವ ಕಲಾವಿದರಾದ ರೋರಿಕ್ ದಂಪತಿಗಳ ಶತಮಾನೋತ್ಸವ ಸಮಾರಂಭ ಸಂದರ್ಭಕ್ಕೆ ಅವರು ವಾಸಿಸುತ್ತಿದ್ದ ಮನೆ, ಸ್ಮಾರಕ ಮತ್ತು ಉದ್ಯಾನವನ ನಿರ್ವಹಣೆಗಾಗಿ 2004-05ನೇ ಸಾಲಿನಲ್ಲಿ ಪರಂಪರೆ ಇಲಾಖೆಯ ಲೆಕ್ಕಶೀರ್ಷಿಕೆ (1) 2205-00-103-0-21 (ಯೋಜನೆ) (2) 2205-00-103-0-22 (ಯೋಜನೆ) (3) 2205-00-103-0-23 (ಯೋಜನೆ) ಅಡಿಯಲ್ಲಿ ನಿಗದಿಪಡಿಸಿರುವ ಅನುದಾನದ ಮಿತಿಯಲ್ಲಿಯೇ ಸದರೀ ಸಮಾರಂಭವನ್ನು ಆಚರಿಸಲು ಬೇಕಾಗಿರುವ ಅನುದಾನ ರೂ. 2.00 ಲಕ್ಷ (ರೂಪಾಯಿ ಎರಡು ಲಕ್ಷ ಮಾತ್ರ) ಗಳನ್ನು ನಿಗದಿಪಡಿಸಿಕೊಳ್ಳಬೇಕೆಂದು ಅನುಮೋದನೆ ನೀಡಲಾಗಿದೆ.

ಪ್ರಕಟಣೆಗಳನ್ನು ಮಾರಾಟ ಮಾಡಲು ಶೇಕಡ 10 ರಷ್ಟು ರಿಯಾಯಿತಿ ನೀಡಲು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರಿಗೆ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆಯ ದಿನಾಂಕ: 14.10.2004ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 1111 ಆಂಆಸ 2004ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1297

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಕಲಂ 30(1) ಹೇಮಾವತಿ ಸಹಕಾರ ಸಕ್ಕರೆ ಕಾರ್ಖಾನೆ ನಿ., ಶ್ರೀನಿವಾಸಪುರ, ಹಾಸನ ಜಿಲ್ಲೆ ಇದಕ್ಕೆ ಸಂಬಂಧಿಸಿದಂತೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:** ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಡಿಎಸ್‌ಕೆ ಇಎಸ್‌ಟಿಎಸ್ : 139: 2002-03, ದಿನಾಂಕ: 13.8.2004.

**ಪ್ರಸ್ತಾವನೆ:-**

ಹೇಮಾವತಿ ಸಹಕಾರ ಸಕ್ಕರೆ ಕಾರ್ಖಾನೆ ನಿ. ಶ್ರೀನಿವಾಸಪುರ, ಹಾಸನ ಜಿಲ್ಲೆ ಇದರ ಆಡಳಿತಗಾರರ ಅವಧಿಯನ್ನು ದಿನಾಂಕ: 21.6.2004 ರಿಂದ 20.12.2004 ರವರೆಗೆ ವಿಸ್ತರಿಸಲು ಅನುಕೂಲವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಪ್ರಕರಣ 121 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 30(1)ಕ್ಕೆ ಸೂಕ್ತ ತಿದ್ದುಪಡಿ ಮಾಡಬೇಕೆಂದು ಮೇಲೆ ಓದಲಾದ ಪತ್ರದಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಮೇಲ್ಕಂಡ ಸಕ್ಕರೆ ಕಾರ್ಖಾನೆಯ ಆಡಳಿತಗಾರರ ಅವಧಿಯನ್ನು ವಿಸ್ತರಿಸಲು ಅನುವಾಗುವಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಮಾತೂ 05 ಸಸಕಾ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಪ್ರಕರಣ 121 ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 30ರ ಪ್ರಕರಣವನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಶ್ರೀನಿವಾಸಪುರ, ಹಾಸನ ಜಿಲ್ಲೆ ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ, ಎಂದರೆ:

**30ರ ಪ್ರಕರಣದಲ್ಲಿ:**

(1)ನೇ ಉಪ ಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಇಪ್ಪತ್ತ ನಾಲ್ಕು ತಿಂಗಳು" ಎಂಬುದಾಗಿ ಸೇರಿಸತಕ್ಕದ್ದು.

**ಸೂಚನೆ:** 30(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 19.6.2005 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ, ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 30(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1298

**ಹೆಚ್. ಗಣೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು**

**ವಿಷಯ:** 2004-05ನೇ ಸಾಲಿನಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ "ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು" ಗಳ ವರ್ಗಾವಣೆ ಕುರಿತು.

**ಉಲ್ಲೇಖ:**
1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿ: 22.11.2001.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಸೇನೌವ 2004, ದಿ: 1.9.2004.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸೇನೌವ 2004, ದಿ: 5.10.2004 ಮತ್ತು 3.11.2004.
4) ಸಂಬಂಧಪಟ್ಟ ಇತರೆ ಕಾಗದ ಪತ್ರಗಳು.

**ಆದೇಶ ಸಂಖ್ಯೆ: ಡಿಪಿಎನ್: ಸಿಶಾ-1:140:2004-05, ಬೆಂಗಳೂರು, ದಿನಾಂಕ: 12ನೇ ನವೆಂಬರ್, 2004**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಗೆ ನಮೂದಿಸಿರುವ ಅಂಕಣ (2) ರಲ್ಲಿ ಸೂಚಿಸಿರುವ "ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು" ಗಳನ್ನು ಅಂಕಣ (3) ರಲ್ಲಿ ಸೂಚಿಸಿರುವ ಸ್ಥಳಗಳಿಗೆ ಸಾರ್ವಜನಿಕ ಹಿತದೃಷ್ಟಿಯಿಂದ : ಕೋರಿಕೆ ಮೇರೆಗೆ ವರ್ಗಾವಣೆ ಮಾಡಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು, ಪದನಾಮ, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವರ್ಗಾವಣೆ ಮಾಡಲಾದ ಕಛೇರಿ ಮತ್ತು ಸ್ಥಳ |
|---|---|---|
| 1 | 2 | 3 |
| | **ಶ್ರೀ : ಶ್ರೀಮತಿ** | |
| 1 | ಜೆ. ಕಮಲ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಕುಣಿಗಲ್ | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ನೆಲಮಂಗಲ (ಖಾಲಿ ಇರುವ ಹುದ್ದೆಗೆ) |
| 2 | ಜಿ. ವೆಂಕಟೇಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಮಾಲೂರು | ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಕುಣಿಗಲ್ (ಶ್ರೀಮತಿ ಜೆ. ಕಮಲ, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 3 | ಶಿವಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಚಾಮರಾಜನಗರ | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಯಳಂದೂರು (ಖಾಲಿ ಇರುವ ಹುದ್ದೆಗೆ) |
| 4 | ಎಸ್.ಆರ್. ಸೂಡಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ನವಲಗುಂದ | ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಜೆಎಂಎಫ್‌ಸಿ ನ್ಯಾಯಾಲಯ, ಚಾಮರಾಜನಗರ (ಶ್ರೀ ಶಿವಣ್ಣ, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 5 | ಸಿ.ಎಂ. ಬೆಳಲದವರ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಹೊಸಪೇಟೆ | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ನವಲಗುಂದ (ಶ್ರೀ ಎಸ್.ಆರ್. ಸೂಡಿ, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 6 | ಬಿ. ರಾಜೇಶ್ವರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಲಿಂಗಸಗೂರು | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಹೊಸಪೇಟೆ (ಶ್ರೀ ಸಿ.ಎಂ. ಬೆಳಲದವರ್, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |

| ಕ್ರ.ಸಂ. | ಅಧಿಕಾರಿಯ ಹೆಸರು, ಪದನಾಮ, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವರ್ಗಾವಣೆ ಮಾಡಲಾದ ಕಛೇರಿ ಮತ್ತು ಸ್ಥಳ |
|---|---|---|
| 7 | ಜುಡಿತ ಓಲ್ಗ ಮಾರ್ಗರೇಟ್ ಕ್ರಾಸ್ಟ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಹೊಳೆನರಸೀಪುರ | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಬಂಟ್ವಾಳ (ಶ್ರೀ ರಾಜು ಪೂಜಾರಿ, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 8 | ರಾಜು ಪೂಜಾರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಬಂಟ್ವಾಳ | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಹೊಳೆನರಸೀಪುರ (ಶ್ರೀಮತಿ ಜುಡಿತ್ ಓಲ್ಗ ಮಾರ್ಗರೇಟ್ ಕ್ರಾಸ್ಟ್, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 9 | ಜಯರಾಮಶೆಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮಡಿಕೇರಿ | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಪುತ್ತೂರು (ಖಾಲಿ ಇರುವ ಹುದ್ದೆಗೆ) |
| 10 | ನಾಗರಾಜ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಬಾಗೇಪಲ್ಲಿ | ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮಡಿಕೇರಿ (ಶ್ರೀ ಜಯರಾಮಶೆಟ್ಟಿ, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 11 | ಜಯಶ್ರೀ ಎಸ್. ಶೆಣೈ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಸೊರಬ | ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಟಿ. ನರಸೀಪುರ (ಶ್ರೀ ಕೆ.ಎಸ್. ರವೀಂದ್ರಗೌಡ, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 12 | ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಟಿ. ನರಸೀಪುರ | ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಪರ ಸಿಜೆಎಂ ನ್ಯಾಯಾಲಯ, ಮೈಸೂರು (ಶ್ರೀ ಜಿ.ಕೆ. ಮಾಹುರೆಕರೆ, ಇವರ ವರ್ಗಾವಣೆಯಿಂದ ತೆರವಾಗುವ ಸ್ಥಳಕ್ಕೆ) |
| 13 | ಜಿ.ಕೆ. ಮಾಹುರೆಕರೆ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಪರ ಸಿಜೆಎಂ ನ್ಯಾಯಾಲಯ, ಮೈಸೂರು | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಜೆಎಂಎಫ್‌ಸಿ ನ್ಯಾಯಾಲಯ, ಚಾಮರಾಜನಗರ (ಖಾಲಿ ಇರುವ ಹುದ್ದೆಗೆ) |

ಈ ಆದೇಶವು ಕೂಡಲೇ ಜಾರಿಗೆ ಬರುತ್ತಿದ್ದು, ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ. ಕ್ರಮ ಸಂಖ್ಯೆ: 1, 2, 4, 6, 7, 9, 11 ಮತ್ತು 12 ರಲ್ಲಿ ಸೂಚಿಸಿರುವ ಅಧಿಕಾರಿಗಳ ವರ್ಗಾವಣೆಯು ಅವರ ವಿನಂತಿಯ ಮೇರೆಗೆ ಆಗಿರುವುದರಿಂದ ಅವರು ಯಾವುದೇ ರೀತಿಯ ವರ್ಗಾವಣೆ ಸೌಲಭ್ಯಗಳಿಗೆ (ಸೇರುವ ಅವಧಿ, ವರ್ಗಾವಣೆ ಅನುದಾನ, ವರ್ಗಾವಣೆ ಪ್ರಯಾಣ ಭತ್ಯೆ, ಇತ್ಯಾದಿ) ಅರ್ಹರಿರುವುದಿಲ್ಲ.

**ಆರ್.ಜೆ. ದೇಸಾಯಿ**

ಪಿ.ಆರ್. 1299 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಶಿವಪ್ಪ ಹಾನಗಲ್, ತಹಶೀಲ್ದಾರ್, ಕುಂದಗೋಳ ತಾಲ್ಲೂಕು, ಧಾರವಾಡ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ:** ಧಾರವಾಡ ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ: ಸಿಬ್ಬಂದಿ/1/ಇವಿ/ವಹಿ-8/2004-05, ದಿನಾಂಕ: 20.11.2004.

**ಪ್ರಸ್ತಾವನೆ:-**

ಕುಂದಗೋಳ ತಾಲ್ಲೂಕು ತಹಶೀಲ್ದಾರ್ ಹಾಗೂ ಅವರ ಕಾರ್ಯಾಲಯದ ಸಿಬ್ಬಂದಿಗಳ ಮೇಲೆ ಅಧ್ಯಕ್ಷರು, ಮಾರುತಿ ರಥೋತ್ಸವ ಸಮಿತಿ, ಕುಂದಗೋಳ ಇವರು ನೀಡಿದ ದೂರನ್ನು ಉಪ ವಿಭಾಗಾಧಿಕಾರಿಗಳು, ಧಾರವಾಡ ಇವರ ಮೂಲಕ ಸ್ಥಾನಿಕವಾಗಿ ವಿಚಾರಣೆ ನಡೆಸಿ ಅವರಿಂದ ವರದಿಯನ್ನು ಪಡೆದು ಕುಂದಗೋಳ ತಹಶೀಲ್ದಾರರಾದ ಶ್ರೀ ಶಿವಪ್ಪ ಹಾನಗಲ್, ಇವರು ಎಸಗಿರುವ ಕರ್ತವ್ಯ ಲೋಪ, ದುರಾಡಳಿತ, ಬೇಜವಾಬ್ದಾರಿ ಹಾಗೂ ಸೋಮಾರಿತನ ಮನೋಭಾವದ ಬಗ್ಗೆ ವಿವರಿಸುತ್ತಾ ಸದರಿಯವರನ್ನು ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಲು ಮೇಲೆ ಓದಲಾದ ಪತ್ರದಲ್ಲಿ ಧಾರವಾಡ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳು ವರದಿ ಮಾಡಿದಂತೆ ಶ್ರೀ ಶಿವಪ್ಪ ಹಾನಗಲ್ ತಹಶೀಲ್ದಾರ್, ಕುಂದಗೋಳ್ ಇವರು ಎಸಗಿದ ದುರ್ನಡತೆ ಹಾಗೂ ಬೇಜವಾಬ್ದಾರಿತನ ಈ ಕೆಳಕಾಣಿಸಿದಂತಿವೆ:

1. ಶ್ರೀ ಲಕ್ಷ್ಮಣ ಬಿಷ್ಟೋ ಕುಲಕರ್ಣಿ ಇವರಿಗೆ ಸಂಬಂಧಿಸಿದ ವೃದ್ಧಾಪ್ಯ ವೇತನ ಪ್ರಕರಣವನ್ನು ದಿನಾಂಕ: 15.7.2004 ರಿಂದ ಬಾಕಿ ಇಟ್ಟು ಇದುವರೆವಿಗೂ ಯಾವುದೇ ಕ್ರಮ ಜರುಗಿಸಿರುವುದಿಲ್ಲ.
2. ಶ್ರೀ ವಸಂತ ಎಲ್ಲಪ್ಪ ಸಾಬಳೆ ಸಾಕಿನ್ ಕಮಡೊಳ್ಳಿ ಇವರಿಗೆ ಸಂಬಂಧಿಸಿದ ಅಂಗವಿಕಲ ಮಾಸಾಶನ ಮಂಜೂರಿ ಪ್ರಕರಣ ದಿನಾಂಕ: 17.12.2003 ರಿಂದ ಬಾಕಿ ಇಟ್ಟು ಯಾವುದೇ ಕ್ರಮ ಜರುಗಿಸಿರುವುದಿಲ್ಲ.
3. ವಿಧವಾ ವೇತನಕ್ಕೆ ಸಂಬಂಧಿಸಿದ ಹಲವಾರು ಪ್ರಕರಣಗಳು ಯಾವುದೇ ಕ್ರಮ ತೆಗೆದುಕೊಳ್ಳದೆ ಬಾಕಿ ಉಳಿದಿರುತ್ತವೆ.
4. ಕಾರ್ಯಾಲಯದಲ್ಲಿ ಸ್ವೀಕೃತವಾಗುವ ಅರ್ಜಿ ಹಾಗೂ ಟಪಾಲುಗಳನ್ನು ಕಛೇರಿಯ ಸಿಬ್ಬಂದಿಗಳು ಸಕಾಲದಲ್ಲಿ ನಿರ್ವಹಿಸುತ್ತಿರುವ ಬಗ್ಗೆ ತಹಶೀಲ್ದಾರರು ಪರಿಶೀಲನೆ ನಡೆಸಿ ಮೇಲ್ವಿಚಾರಣೆ ಮಾಡಿರುವುದಿಲ್ಲ.
5. ಹಕ್ಕುದಾಖಲಾತಿಗೆ ಸಂಬಂಧಿಸಿದ ಸುಮಾರು 57 ಪ್ರಕರಣಗಳು ಇತ್ಯರ್ಥಕ್ಕಾಗಿ ಬಾಕಿ ಇದ್ದು, ತಹಸೀಲ್ದಾರರು ಈ ಬಗ್ಗೆ ಯಾವುದೇ ಕ್ರಮ ಜರುಗಿಸಿರುವುದಿಲ್ಲ.
6. ಗಣಕೀಕರಣ ವಿಭಾಗದಲ್ಲಿ ಹಕ್ಕು ದಾಖಲಾತಿಯ ಸುಮಾರು ಪ್ರಕರಣಗಳು ಬಾಕಿ ಇರುತ್ತವೆ. ಸುಮಾರು 422 ಹಕ್ಕು ದಾಖಲಾತಿ ಪ್ರಕರಣಗಳು ಶಿರಸ್ತೇದಾರರ ಅನುಮೋದನೆಗಾಗಿ ಬಾಕಿ ಇರುತ್ತವೆ. ಇವುಗಳನ್ನು ಇತ್ಯರ್ಥಪಡಿಸುವ ಬಗ್ಗೆ ಸಮರ್ಪಕವಾಗಿ ಮೇಲ್ವಿಚಾರಣೆ ಮಾಡುವ ಬಗ್ಗೆ ತಹಶೀಲ್ದಾರರು ಯಾವುದೇ ಕ್ರಮ ವಹಿಸಿರುವುದಿಲ್ಲ.

ಅದರಂತೆಯೇ ದಿನಾಂಕ: 19.11.2004 ರಂದು ಮಾನ್ಯ ಕಂದಾಯ ಸಚಿವರು ಕುಂದಗೋಳ ತಾಲ್ಲೂಕಿಗೆ ಭೇಟಿ ನೀಡಿದಾಗ ತಹಶೀಲ್ದಾರರು ಮಾಡುತ್ತಿರುವ ಭ್ರಷ್ಟಾಚಾರ, ಬೇಜವಾಬ್ದಾರಿತನ ಹಾಗೂ ಇತರ ಕರ್ತವ್ಯ ಲೋಪಗಳ ಬಗ್ಗೆ ಸಾರ್ವಜನಿಕರು ದೂರು ಸಲ್ಲಿಸಿದ್ದು ತಹಶೀಲ್ದಾರರ ಈ ವರ್ತನೆಯ ಬಗ್ಗೆ ಮಾನ್ಯ ಕಂದಾಯ ಸಚಿವರು ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಿರುವುದಾಗಿ ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ. ಜಿಲ್ಲಾಧಿಕಾರಿಗಳ ಪ್ರಸ್ತಾವವನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಶಿವಪ್ಪ ಹಾನಗಲ್, ತಹಶೀಲ್ದಾರ್, ಕುಂದಗೋಳ ಇವರ ಕಾರ್ಯವೈಖರಿಯನ್ನು ಗಂಭೀರವಾಗಿ ಪರಿಗಣಿಸಿ ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರ ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಎಡಿಇ 2004, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಶಿವಪ್ಪ ಹಾನಗಲ್, ತಹಶೀಲ್ದಾರ್, ಕುಂದಗೋಳ್ ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇಟ್ಟು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10ರ ಅಡಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

2. ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಹಾಗೂ ಈ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರಿಯವರ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1300

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಗಂಗಾವತಿ - ಆನೆಗುಂದಿ - ಮುನಿರಾಬಾದ್ ರಸ್ತೆಯಿಂದ ಆನೆಗುಂದಿ ಸೇತುವೆಗೆ ಸೇರುವ ಕೂಡು ರಸ್ತೆ ಹಾಗೂ ಆನೆಗುಂದಿ ಗ್ರಾಮದ ಲೂಪ್ ಗ್ರಾಮೀಣ ರಸ್ತೆಗಳನ್ನು ಮೇಲ್ದರ್ಜೆಗೇರಿಸಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ಇವರ ಪತ್ರ ಸಂಖ್ಯೆ: ಮುಇಂ:ಉ:ತಾ.ಶಾ. ಸಇಂ. ರಸ್ತೆ ಅಭಿವೃದ್ಧಿ 2004-05, ದಿನಾಂಕ: 20.11.2004.

**ಪ್ರಸ್ತಾವನೆ:-**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಈ ಕೆಳಕಂಡ 2 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | |
|---|---|---|
| 1 | ಗಂಗಾವತಿ ತಾಲ್ಲೂಕಿನ ಗಂಗಾವತಿ-ಆನೆಗುಂದಿ-ಮುನಿರಾಬಾದ್ ರಸ್ತೆಯಿಂದ ಆನೆಗುಂದಿ ಮುಖಾಂತರ ಆನೆಗುಂದಿ ಸೇತುವೆಗೆ ಸೇರುವ ಕೂಡು ರಸ್ತೆ | 1.50 ಕಿಮೀ |
| 2 | ಆನೆಗುಂದಿ ಗ್ರಾಮದಲ್ಲಿನ ಲೂಪ್ ರಸ್ತೆ | 1.00 ಕಿಮೀ |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 127 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಹಳ್ಳಿ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| | | |
|---|---|---|
| 1 | ಗಂಗಾವತಿ ತಾಲ್ಲೂಕಿನ ಗಂಗಾವತಿ-ಆನೆಗುಂದಿ-ಮುನಿರಾಬಾದ್ ರಸ್ತೆಯಿಂದ ಆನೆಗುಂದಿ ಮುಖಾಂತರ ಆನೆಗುಂದಿ ಸೇತುವೆಗೆ ಸೇರುವ ಕೂಡು ರಸ್ತೆ | 1.50 ಕಿಮೀ |
| 2 | ಆನೆಗುಂದಿ ಗ್ರಾಮದಲ್ಲಿನ ಲೂಪ್ ರಸ್ತೆ | 1.00 ಕಿಮೀ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1301

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ನೇಕಾರರಿಗೆ ವಿಶೇಷ ಪ್ಯಾಕೇಜ್ ನೀಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ವಾಕೈ 110 ಜಕೈಇ 2003, ದಿನಾಂಕ: 26.02.2004.

**ಪ್ರಸ್ತಾವನೆ :–**

ರಾಜ್ಯದಲ್ಲಿನ ನೇಕಾರರು ಎದುರಿಸುತ್ತಿರುವ ಸಮಸ್ಯೆಗಳನ್ನು ವಿವರವಾಗಿ ಪರಿಶೀಲಿಸಿದ ನಂತರ ಅವುಗಳಿಗೆ ಪರಿಹಾರ ನೀಡುವ ದಿಸೆಯಲ್ಲಿ ನೇಕಾರರಿಗೆ ವಿವಿಧ ಸವಲತ್ತುಗಳನ್ನು ಹೊಂದಿದ ವಿಶೇಷ ಪ್ಯಾಕೇಜನ್ನು ಮೇಲೆ ಓದಲಾದ ಆದೇಶದಲ್ಲಿ ಮಂಜೂರು ಮಾಡಲಾಗಿತ್ತು. ನಂತರ ಆ ಪ್ಯಾಕೇಜ್‌ನಲ್ಲಿನ ಕೆಲವು ಸವಲತ್ತುಗಳನ್ನು ಮಾರ್ಪಡಿಸುವ ಅವಶ್ಯಕತೆ ಕಂಡುಬಂದಿರುತ್ತದೆ. ಆದ್ದರಿಂದ ಅಂತಹ ಸವಲತ್ತುಗಳ ಕುರಿತಂತೆ ಪುನ: ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 70 ಜಕೈಇ 2004, ಬೆಂಗಳೂರು, ದಿನಾಂಕ: 09ನೇ ನವೆಂಬರ್ 2004**

ಆ ಹಿನ್ನೆಲೆಯಲ್ಲಿ ರಾಜ್ಯದ ನೇಕಾರರಿಗೆ ಮಾರ್ಪಡಿಸಿದ ವಿಶೇಷ ಪ್ಯಾಕೇಜನ್ನು ಈ ಕೆಳಗಿನಂತೆ ಸರ್ಕಾರ ಮಂಜೂರು ಮಾಡಿರುತ್ತದೆ.

(ರೂ. ಕೋಟಿಗಳಲ್ಲಿ)

1. 10ಹೆಚ್.ಪಿ ವಿದ್ಯುತ್ ಸಂಪರ್ಕ ಹೊಂದಿರುವ 10 ವಿದ್ಯುತ್ ಮಗ್ಗಗಳಿಗೆ ಸಂಬಂಧಿಸಿದಂತೆ ಇತರೆ ಮಗ್ಗಪೂರ್ವ ಚಟುವಟಿಕೆಗಳಿಗೂ (ಹರಿ ಮಿಷನ್ ಇತ್ಯಾದಿ) ಅನ್ವಯಿಸುವಂತೆ ಒಂದು ಯೂನಿಟ್‌ಗೆ ರೂ.1.25ಗಳ ದರ ನಿಗದಿಪಡಿಸಿ, ಹಾಲಿ ಜಾರಿಯಲ್ಲಿರುವ 13.25

ವಿದ್ಯುತ್ ದರ ಹಾಗೂ ಸಬ್ಸಿಡಿ ದರ ಇವುಗಳ ವ್ಯತ್ಯಾಸದ ಮೊತ್ತವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಇವರಿಗೆ ಸರ್ಕಾರ ಪಾವತಿಸುವುದು.

| | | |
|---|---|---|
| 2. | ನೇಕಾರರಿಗೆ 'ಯಶಸ್ವಿನಿ ಯೋಜನೆ'ಯ ಮಾದರಿಯಲ್ಲಿ ಆರೋಗ್ಯ ಯೋಜನೆಯನ್ನು ಜಾರಿಗೆ ತರುವುದು (ಸಧ್ಯಕ್ಕೆ ಪ್ರಾಥಮಿಕ ಕೈಮಗ್ಗ ನೇಕಾರರ ಸಹಕಾರ ಸಂಘಗಳು, ಪ್ರಾಥಮಿಕ ವಿದ್ಯುತ್ ಮಗ್ಗಗಳ ನೇಕಾರರ ಸಂಘಗಳು ಹಾಗೂ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಇದರಡಿ ನೊಂದಾಯಿಸಿದ ನೇಕಾರರಿಗೆ ಅಳವಡಿಸಿ, ನಂತರ ಇತರ ನೇಕಾರರಿಗೆ ವಿಸ್ತರಿಸುವುದು). | 1.00 |
| 3. | ನೇಕಾರರು ರಾಜ್ಯ ವಲಯ ಹಾಗೂ ಜಿಲ್ಲಾ ವಲಯ ವ್ಯಾಪ್ತಿಗೆ ಬರುವ ಯೋಜನೆಗಳಡಿ ಸರ್ಕಾರದಿಂದ ಪಡೆದ ಸಾಲಗಳ ಮೇಲಿನ ಬಡ್ಡಿ ಹಾಗೂ ಸುಸ್ತಿಬಡ್ಡಿಯನ್ನು ಮನ್ನಾ ಮಾಡುವುದು. | 10.83 |
| 4. | ಕರ್ನಾಟಕ ಕೈಮಗ್ಗ ತರಬೇತಿ ಸಂಸ್ಥೆ, ಗದಗ್ ಹಾಗೂ ಅಡ್ವಾನ್ಸಡ್ ಕೈಮಗ್ಗ ಸಂಸ್ಥೆ, ಜಮಖಂಡಿ, ಇವರಿಗೆ ತಲಾ 15.00ಲಕ್ಷಗಳನ್ನು ಪ್ರಸಕ್ತ ಸಾಲಿನಲ್ಲಿ ಹೆಚ್ಚುವರಿಯಾಗಿ ಆವರ್ತಕ ವೆಚ್ಚ ಭರಿಸಲು | 0.30 |
| 5. | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತದ ಮುಖಾಂತರ 12 ಸಾವಿರ ನೇಕಾರರಿಗೆ ಕಚ್ಚಾ ಮಾಲು ಖರೀದಿಸಲು ದುಡಿಯುವ ಬಂಡವಾಳ (Working Capital) ಒದಗಿಸುವುದು. | 1.00 |
| 6. | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ, ಇವರಿಗೆ ಮಾರ್ಜಿನ್ ಮನಿ ಒದಗಿಸುವುದು. | 2.00 |
| 7. | ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕಿನಲ್ಲಿ ಪವರ್ ಲೂಮ್ ಪಾರ್ಕ್ ಸ್ಥಾಪಿಸುವುದನ್ನು ಇಲಾಖಾ ಕಾರ್ಯಕ್ರಮಗಳಲ್ಲಿ ಅಳವಡಿಸುವುದು. | - |

ಈ ಮೇಲೆ ಕ್ರಮಸಂಖ್ಯೆ (1)ರಲ್ಲಿ ನಮೂದಿಸಿರುವ ಸೌಲಭ್ಯವು ದಿನಾಂಕ:2.10.2004ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುತ್ತದೆ.

2004–05ನೇ ಸಾಲಿನಲ್ಲಿ 'ನೇಕಾರರ ಪ್ಯಾಕೇಜ್'ಗೆ ಲೆಕ್ಕಶೀರ್ಷಿಕೆ 2851–00–103–0–62 (ಯೋಜನೆ)ರ ಅಡಿ ಒದಗಿಸಿರುವ ರೂ.20.00ಕೋಟಿಗಳ ಜೊತೆಗೆ ರೂ.6.00ಕೋಟಿಗಳನ್ನು ಹೆಚ್ಚುವರಿ ಅನುದಾನ ಒದಗಿಸಲಾಗಿದೆ.

ಈ ಹಿಂದೆ ಆದೇಶ ಸಂಖ್ಯೆವಾಕೈ 110 ಜಕೈಇ 2003, ದಿನಾಂಕ:26.02.2004ರಲ್ಲಿ ಮಂಜೂರು ಮಾಡಿರುವ ಇತರೆ ಸವಲತ್ತುಗಳು ಹಾಗೆಯೇ ಮುಂದುವರಿಯುತ್ತವೆ.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಆಇ 1905 ವೆಚ್ಚ–1/2004, ದಿನಾಂಕ:6.11.2004ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1266

**ಎಂ. ಕರಿಯಪ್ಪ**

ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ತಿದ್ದೋಲೆ**

**ಸರ್ಕಾರದ ಆದೇಶ ಸಂಖ್ಯೆ: ವಾಕೈ 204 ಕೈಸೇವಿ 2004, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2004**

ಸರ್ಕಾರಿ ಆದೇಶ ಸಂಖ್ಯೆ: ವಾಕೈ 125 ಕೈಸೇವಿ 2004, ದಿನಾಂಕ; 23.7.2004ರ ಅನುಬಂಧ 'ಅ' ದಲ್ಲಿನ ಕ್ರಮ ಸಂಖ್ಯೆ: 26 ಅಂಕಣ 3 ರಲ್ಲಿ "ತುಮಕೂರು" ಎಂದು ನಮೂದಿಸಿರುವುದಕ್ಕೆ ಬದಲಾಗಿ "ಹಿರೇಹಳ್ಳಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1267

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು).

**ವಿಷಯ:–** ಕೊಡಗು ಜಿಲ್ಲಾ ಪಂಚಾಯತಿಯಲ್ಲಿ ನಡೆದ ಅಕ್ರಮಗಳು – ಶ್ರೀ ಎಂ.ವಿ.ನಾಗರಾಜಯ್ಯ, ಜಂಟಿ ನಿರ್ದೇಶಕರು (ನಿವೃತ್ತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆ – ದೋಷ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:–**
1) ಸಿ.ಓ.ಡಿ ವರದಿ ಸಂಖ್ಯೆ: 18/ಸಿಆರ್ಎಂ/ಐಫ್ಎಸ್/ಸಿ.ಓ.ಡಿ/95, ದಿನಾಂಕ:18/22–12.1997. ಆಧಾರಿತ ಆರೋಪಗಳು.
2) ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ 142 ಕೈಸೇವಿ 97, ದಿನಾಂಕ: 12.03.98.
3) ಶ್ರೀ ಎಂ.ವಿ.ನಾಗರಾಜಯ್ಯನವರ ಪತ್ರದ ದಿನಾಂಕ: 06.04.1998.
4) ಸರ್ಕಾರದ ಆದೇಶ ಸಂಖ್ಯೆ:ವಾಕೈ 142 ಕೈಸೇವಿ 1997, ದಿನಾಂಕ:19–06–2003.
5) ಅಪರ ನಿರ್ದೇಶಕರು (ವಿಶ್ವ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಕೈವಾಇ/ವಿಶ್ವ/ಉನಿ (ಉ) 2003–04, ದಿನಾಂಕ:11–06–2004.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ವರದಿಯಲ್ಲಿ ಶ್ರೀ ಎಂ.ವಿ.ನಾಗರಾಜಯ್ಯ, ಜಂಟಿ ನಿರ್ದೇಶಕರು (ನಿವೃತ್ತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಈ ಹಿಂದೆ ಕೊಡಗು ಜಿಲ್ಲಾ ಕೈಗಾರಿಕಾ ಸರಬರಾಜು ಮಾರಾಟ ಸಹಕಾರ ಸಂಘ (ನಿ) ಇದರ ವ್ಯವಸ್ಥಾಪಕ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ಸಂಘದ ಮುಖಾಂತರ ಪೂರೈಸಲಾದ ಕ್ರೀಡಾ ಸಾಮಗ್ರಿಗಳ ಖರೀದಿ ಇತ್ಯಾದಿಗಳ ಬಗ್ಗೆ ಸಿ.ಓ.ಡಿ. ಆಧಾರದ ಆರೋಪಗಳ ಮೇಲೆ ಶಿಸ್ತು ಕ್ರಮವನ್ನು ಜರುಗಿಸಲು ತೀರ್ಮಾನಿಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ: 12.03.98ರ ಷೋಕಾಸ್‌ನೊಡನೆ ಆರೋಪಣಾ ಪಟ್ಟಿಯನ್ನು ಜಾರಿ ಮಾಡಿ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾಗಿರುವ ಆಪಾದಿತ ಅಧಿಕಾರಿಯ ರಕ್ಷಣಾ ಹೇಳಿಕೆಯಲ್ಲಿ ಅವರ ಮೇಲಿನ ಆರೋಪಗಳನ್ನು ಅಲ್ಲಗೆಳೆದು ಯಾವುದೇ ಲೋಪದೋಷವೆಸಗಿಲ್ಲವೆಂದು ವಿವರಿಸಿ ಕೆಲವು ದಾಖಲೆಗಳ ಪ್ರತಿಗಳನ್ನು ಒದಗಿಸಿರುತ್ತಾರೆ.

ಸರ್ಕಾರವು ಸದರಿ ಅಧಿಕಾರಿಯು ಸಲ್ಲಿಸಿದ್ದ ವಿವರಣೆ ಮತ್ತು ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲ್ನೋಟಕ್ಕೆ ಅವರ ಹೇಳಿಕೆಗಳು ಸಮರ್ಥನೀಯವಾಗಿಲ್ಲವಾದ್ದರಿಂದ ಸತ್ಯಾಸತ್ಯತೆಯನ್ನು ತಿಳಿಯಲು ಈ ಪ್ರಕರಣದಲ್ಲಿ ಇಲಾಖೆ ವಿಚಾರಣೆಯನ್ನು ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಅಧಿಕ ನಿರ್ದೇಶಕರು (ವಿಶ್ವ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ನಿರ್ದೇಶಕರು (ವಿಶ್ವ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು, ಶ್ರೀ ಎಂ.ವಿ.ನಾಗರಾಜಯ್ಯ, ಜಂಟಿ ನಿರ್ದೇಶಕರು (ನಿವೃತ್ತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಮಾಡಲಾದ ಆರೋಪಗಳಿಗೆ ಸಂಬಂಧಿಸಿದಂತೆ, ಇಲಾಖಾ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (5)ರನ್ವಯ ಸರ್ಕಾರಕ್ಕೆ ಸಲ್ಲಿಸಿದ ವರದಿಯಲ್ಲಿ ಸದರೀ ಪ್ರಕರಣಕ್ಕೆ ಸಂಬಂಧಿಸಿದಂತೆ, ಆರೋಪಗಳನ್ನು ಸಾಬೀತುಪಡಿಸಲು ಮೂಲ ದಾಖಲೆ ಪುರಾವೆಗಳನ್ನು ಒದಗಿಸಲು ಪ್ರಮುಖ ಸಾಕ್ಷಿಗಳು ಅಸಮರ್ಥರಾದ ಕಾರಣ, ಇವರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಂ.ವಿ.ನಾಗರಾಜಯ್ಯ, ನಿವೃತ್ತ ಜಂಟಿ ನಿರ್ದೇಶಕರು, ಇವರನ್ನು ಈ ಪ್ರಕರಣದಲ್ಲಿ ದೋಷಮುಕ್ತರನ್ನಾಗಿ ಮಾಡಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 142 ಕೈಸೇವಿ 1997, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಂ.ವಿ.ನಾಗರಾಜಯ್ಯ, ಇವರು ಕೊಡಗು ಜಿಲ್ಲಾ ಕೈಗಾರಿಕಾ ಸರಬರಾಜು ಮಾರಾಟ ಸಹಕಾರ ಸಂಘ (ನಿಯಮಿತ) ಇದರ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆಂಬ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವಾದ್ದರಿಂದ ಇವರನ್ನು ಈ ಪ್ರಕರಣದಲ್ಲಿ ದೋಷಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1268

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸೇವೆಗಳು)

**ವಿಷಯ:–** ಶ್ರೀ ಎಂ.ಸಿ ತಿಪ್ಪಣ್ಣನವರ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕೈಗಾರಿಕಾ ಕೇಂದ್ರ, ನವಲಗುಂದ, ಇವರ ಅರ್ಹತಾ ಪೂರ್ವ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:–** ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಆಡಳಿತ:ಸಿಬ್ಬಂದಿ: ಇ1/64/2004–05 ದಿನಾಂಕ: 20–08–2004 ಮತ್ತು 12–10–2004

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಶ್ರೀ ಎಂ.ಸಿ.ತಿಪ್ಪಣ್ಣನವರ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕೈಗಾರಿಕಾ ಕೇಂದ್ರ, ನವಲಗುಂದ, ಧಾರವಾಡ ಜಿಲ್ಲೆ, ಇವರನ್ನು ದಿನಾಂಕ:20–03–1998 ರಂದು ದ್ವಿತೀಯ ದರ್ಜೆ ಸಹಾಯಕರಾಗಿ ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಲಾಗಿದ್ದು, ಅದರಂತೆ ಶ್ರೀಯುತರು ದಿನಾಂಕ; 01–04–1998ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿದ್ದು ಇವರು ದಿನಾಂಕ: 31–03–2000 ರವರಗೆ ಅರ್ಹತಾ ಪೂರ್ವ ಅವಧಿಯಲ್ಲಿದ್ದು, ಶ್ರೀಯುತರು 2 ವರ್ಷದ ಅರ್ಹತಾ ಪೂರ್ವ ಅವಧಿಯೊಳಗೆ ನಿಗದಿತ ಇಲಾಖಾ ಪರೀಕ್ಷೆಯಾದ 'ಅಕೌಂಟ್ಸ್ ಲೋಯರ್' ತೇರ್ಗಡೆಯಾಗದ ಕಾರಣ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರ ಕಛೇರಿ ಆದೇಶ ದಿನಾಂಕ: 16–06 2004ರಂದು ಸದರಿ ನೌಕರರ ಅರ್ಹತಾ ಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪ್ರೋಬೇಷನ್) ನಿಯಮಗಳು 1977ರ ನಿಯಮ 4 (i) (ii)ರನ್ವಯ ಒಂದು ವರ್ಷ ಅಂದರೆ ದಿನಾಂಕ: 01–04–2000 ರಿಂದ 31–03–2001 ರವರಗೆ ವಿಸ್ತರಿಸಿದ್ದು, ತದನಂತರ ಸದರಿ ನೌಕರರು ಲೋಕಸೇವಾ ಆಯೋಗ ನಡೆಸಿದ ಇಲಾಖೆ ಪರೀಕ್ಷೆಯಾದ ಅಕೌಂಟ್ಸ್ ಲೋಯರ್‌ಗೆ ದಿನಾಂಕ: 24–01–2001 ರಂದು ಹಾಜರಾಗಿ ತೇರ್ಗಡೆಯಾಗಿದ್ದು, ಸದರಿ ಪರೀಕ್ಷೆ ಫಲಿತಾಂಶವು ಕರ್ನಾಟಕ ರಾಜ್ಯ ಪತ್ರ ದಿನಾಂಕ: 24–05–2001ರಲ್ಲಿ ಪ್ರಕಟವಾಗಿದ್ದು, ಈ ಹಿನ್ನಲೆಯಲ್ಲಿ ಸದರಿ ನೌಕರರ ಅರ್ಹತಾ ಪೂರ್ವ ಅವಧಿಯನ್ನು ದಿನಾಂಕ:01–04–2001 ರಿಂದ 24–05–2001 ರವರಗೆ ಕರ್ನಾಟಕ ನಾಗರೀಕ ಸೇವಾ (ಪ್ರೋಬೇಷನ್) ನಿಯಮಗಳು 1977ರ ನಿಯಮ 4(i) ರನ್ವಯ ಸರ್ಕಾರದ ಹಂತದಲ್ಲಿ ವಿಸ್ತರಿಸಿ ಆದೇಶ ನೀಡುವಂತೆ ಕೋರಿರುವರು.

ಈ ನೌಕರರ ಸೇವಾ ಪುಸ್ತಕವನ್ನು ಸಂಬಂಧಪಟ್ಟ ದಾಖಲೆಗಳ ಪ್ರತಿಗಳ ಹಾಗೂ ನಿರ್ದೇಶಕರು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 168 ಕೈಸೇವಿ 2004, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2004**

ಶ್ರೀ ಎಂ.ಸಿ.ತಿಪ್ಪಣ್ಣನವರ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕೈಗಾರಿಕಾ ಕೇಂದ್ರ, ನವಲಗುಂದ, ಇವರ ಅರ್ಹತಾ ಪೂರ್ವ ಅವಧಿಯನ್ನು ದಿನಾಂಕ: 01–04–2001 ರಿಂದ 24–05–2001 ರವರಗೆ ಕರ್ನಾಟಕ ನಾಗರೀಕ ಸೇವಾ (ಪ್ರೋಬೇಷನ್) ನಿಯಮಗಳು 1977ರ ನಿಯಮ 4(i) ರ ಮೇರೆಗೆ ಸರ್ಕಾರವು ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1269

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. (ಸೇವೆಗಳು)

**ವಿಷಯ:–** ರೇಷ್ಮೆ ಇಲಾಖೆಯ ಅಧಿಕಾರಿ / ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:–**
(1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ದಿನಾಂಕ:01.09.2003.
(2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ದಿನಾಂಕ:17.05.2004.
(3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ದಿನಾಂಕ:21.06.2004.
(4) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ದಿನಾಂಕ:08.09.2004.
(5) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ 1(3): ರೇಜಂನಿ:ಸ್ವನಿ:24: 04–05, ದಿನಾಂಕ:27.08.2004.
(6) ಪತ್ರ ಸಂಖ್ಯೆ: ಸಿಬ್ಬಂದಿ 1(3):ರೇಉನಿ:ಸ್ವನಿ:36: 04–05, ದಿನಾಂಕ:16.08.2004, 27.08.2004.
(7) ಪತ್ರ ಸಂಖ್ಯೆ: ಸಿಬ್ಬಂದಿ 1(3):ರೇಸನಿ:ಸ್ವನಿ:37: 04–05, ದಿನಾಂಕ:18.08.2004.
(8) ಪತ್ರ ಸಂಖ್ಯೆ: ಸಿಬ್ಬಂದಿ 1(4):ರೇವಿಅ:ಸ್ವನಿಯೋ:53: 03–04, ದಿನಾಂಕ:19.08.2004.

(9) ಪತ್ರ ಸಂಖ್ಯೆ: ಸಿಬ್ಬಂದಿ 1(4):ಇರೇನಿ:ಸ್ವನಿ:15: 04–05, ದಿನಾಂಕ:12.08.2004.
(10) ಪತ್ರ ಸಂಖ್ಯೆ: ಸಿ1(6):ರೇನಿ:ವಿಸ್ವನಿ:19: 03–04, ದಿನಾಂಕ:08.07.2004, 3.08.2004, 13.08.2004, 26.08.2004.
(11) ಪತ್ರ ಸಂಖ್ಯೆ: ಸಿಬ್ಬಂದಿ 1(8):ವಿಸ್ವಯಂನಿ:35: 04–05, ದಿನಾಂಕ:11.08.2004,19.08.2004, 20.08.2004.
(12) ಪತ್ರ ಸಂಖ್ಯೆ: ಸಿಬ್ಬಂದಿ 1(5):ರೇಪ್ರವ:ಸ್ವನಿವೃ::70: 03–04, ದಿನಾಂಕ:12.08.2004, 19.08.2004.
(13) ಪತ್ರ ಸಂಖ್ಯೆ: ಸಿಬ್ಬಂದಿ 1(2):ಮಹಾಲೆ:ಸ್ವಯಂನಿವೃತ್ತಿ:11:04–05, ದಿನಾಂಕ:19.08.2004.
(14) ಪತ್ರ ಸಂಖ್ಯೆ: ಸಿಬ್ಬಂದಿ 1(2):ಪ್ರತಿಮ:ವಿಸ್ವನಿ:18: 04–05, ದಿನಾಂಕ:05.08.2004,19.08.2004.
(15) ಪತ್ರ ಸಂಖ್ಯೆ: ಸಿಬ್ಬಂದಿ 1(2):ಅಧೀ:ವಿಸ್ವನಿ:17: 04–05, ದಿನಾಂಕ:11.08.2004, 16.18.2004, 20.08.2004.
(16) ಪತ್ರ ಸಂಖ್ಯೆ: ಸಿಬ್ಬಂದಿ 1(1):ಶೀಘ್ರಲಿಪಿ:ವಿಸ್ವನಿ:17: 04–05, ದಿನಾಂಕ:07.08.2004.
(17) ಪತ್ರ ಸಂಖ್ಯೆ: ಸಿಬ್ಬಂದಿ 1(1):ಪ್ರದಸ:ಸ್ವನಿವೃತ್ತಿ:15: 04–05, ದಿನಾಂಕ: 07.08.2004, 13.08.2004, 19.08.2004
(18) ಪತ್ರ ಸಂಖ್ಯೆ: ಸಿಬ್ಬಂದಿ 1(1):ದ್ವಿದಸ:ಸ್ವನಿವೃತ್ತಿ::16: 04–05, ದಿನಾಂಕ:11.08.2004, 19.08.2004.
(19) ಪತ್ರ ಸಂಖ್ಯೆ: ಸಿಬ್ಬಂದಿ 1(1):ಬೆರಳ:ಸ್ವನಿ:17: 04–05, ದಿನಾಂಕ:19.08.2004.
(20) ಪತ್ರ ಸಂಖ್ಯೆ: ಸಿಬ್ಬಂದಿ 1(2ಎ):ವಾಚಾ:ವಿಸ್ವನಿ:29: 04–05, ದಿನಾಂಕ:18.08.2004, 25.08.2004.
(21) ಪತ್ರ ಸಂಖ್ಯೆ: ಸಿಬ್ಬಂದಿ 1(2ಎ):ಅನುಚ:ವಿಸ್ವನಿ:30: 04–05, ದಿನಾಂಕ:17.08.2004.
(22) ಪತ್ರ ಸಂಖ್ಯೆ: ಸಿಬ್ಬಂದಿ 1(2ಎ):ತೂಕ ಮಾಡುವವರು:ವಿಸ್ವನಿ: 31:04–05, ದಿನಾಂಕ:17.08.2004.
(23) ಪತ್ರ ಸಂಖ್ಯೆ: ಸಿಬ್ಬಂದಿ 1(2ಎ):ಡಿಗ್ರೂಪ್:ವಿಸ್ವನಿ:32: 04–05, ದಿನಾಂಕ:17.08.2004, 19.08.2004.

**ಪ್ರಸ್ತಾವನೆ:–**

ರಾಜ್ಯ ಸರ್ಕಾರದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ಪ್ರಕಟಿಸಲಾಗಿದ್ದು, ನಂತರ (2), (3) ಮತ್ತು (4)ರ ಆದೇಶಗಳಲ್ಲಿ ಸದರಿ ಆದೇಶಕ್ಕೆ ಕೆಲವು ಮಾರ್ಪಾಡುಗಳನ್ನು ತರಲಾಗಿದೆ. ಆ ಹಿನ್ನೆಲೆಯಲ್ಲಿ ರೇಷ್ಮೆ ಇಲಾಖೆಯ ವಿವಿಧ ವೃಂದಗಳ ಅಧಿಕಾರಿ/ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯ ಸೌಲಭ್ಯ ನೀಡುವ ಕುರಿತಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಮೇಲೆ ಓದಲಾದ (5) ರಿಂದ (23) ರವರೆಗೆ ಓದಲಾದ ಪತ್ರಗಳಲ್ಲಿ ಪ್ರಸ್ತಾವನೆಗಳನ್ನು ಸಲ್ಲಿಸಿರುತ್ತಾರೆ. ಆ ಪ್ರಕಾರ ಇಲಾಖೆಯ ವಿವಿಧ ವೃಂದಗಳಿಗೆ ಸೇರಿದ ಒಟ್ಟು 173 ಅಧಿಕಾರಿ/ನೌಕರರು ಈ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆಂದು ತಿಳಿಸುತ್ತಾ, ಆ ಪ್ರಕರಣಗಳನ್ನು ಸದರಿ ಯೋಜನೆಯಡಿ ಪರಿಗಣಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 127 ರೇಇವಿ 2004, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2004**

ಆ ಹಿನ್ನೆಲೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ರೇಷ್ಮೆ ಇಲಾಖೆಯ ವಿವಿಧ ವೃಂದಗಳ ಒಟ್ಟು 173 ಅಧಿಕಾರಿ/ನೌಕರರಿಗೆ ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ:1.09.2003, 17.05.2004, 21.06.2004 ಹಾಗೂ 8.09.2004ರಲ್ಲಿ ನಮೂದಿಸಿರುವ ಷರತ್ತುಗಳನ್ನು ಪೂರೈಸುವುದಕ್ಕೆ ಬದ್ಧವಾಗಿ ದಿನಾಂಕ:30.11.2004ರ ಅಪರಾಹ್ನದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆ ಅಡಿ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಮಂಜೂರು ಮಾಡಲಾದ ಈ ಮೊಬಲಗನ್ನು ಮೊದಲು ಸಾದಿಲ್ವಾರು ನಿಧಿಯಿಂದ ಲೆಕ್ಕ ಶೀರ್ಷಿಕೆ '8000–00–229–0–00 ವಿಶ್ರಾಂತಿ ವೇತನ ಮತ್ತು ಇವರ ನಿವೃತ್ತಿ ವೇತನ' ಇದರಡಿಯಲ್ಲಿ ಬಿಡುಗಡೆ ಮಾಡಿ ನಂತರ ಲೆಕ್ಕ ಶೀರ್ಷಿಕೆ '2071–01–200–2–01 Exgratia under Special VRS ವಿಶೇಷ ಸ್ವಯಂ ನಿವೃತ್ತಿಯ ಅನುಗ್ರಹ ಕೊಡುಗೆ' ಇದರಡಿಯಲ್ಲಿ ಪೂರಕ ಅಂದಾಜುಗಳಲ್ಲಿ ನಿಧಿಗೆ ಮರು ತುಂಬಲಾಗುವುದು. ಆರ್ಥಿಕ ಇಲಾಖೆಯ ಈ ಮೊಬಲಗನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು. ಆರ್ಥಿಕ ಇಲಾಖೆಯ ಪ್ರತ್ಯೇಕ ಆದೇಶವಿಲ್ಲದೆ ಈ ಆದೇಶದ ಮೇಲೆಯೇ ಮೊಬಲಗನ್ನು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಿದಾಗ ಇಲಾಖೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸಿರುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯ ಹಣವನ್ನು ಬಿಡುಗಡೆ ಮಾಡಲು ಕ್ರಮ ತೆಗೆದುಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ; ಆಇ 1686/ವೆಚ್ಚ–1/04 ದಿನಾಂಕ:14.10.2004ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಹರಿಹರನ್**
ಪೀಠಾಧಿಕಾರಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ (ರೇಷ್ಮೆ)

**ಅನುಬಂಧ**

**ವಿಶೇಷ ಸ್ವಯಂ ನಿವೃತ್ತಿ ಯೋಜನೆ**

**ಸರ್ಕಾರಿ ಆದೇಶ ಸಂಖ್ಯೆ ವಾಕೈ 127 ರೇಇವಿ 2004 ದಿನಾಂಕ 12–11–2004**

**ರೇಷ್ಮೆ ಜಂಟಿ ನಿರ್ದೇಶಕರು**

| ಕ್ರಮ ಸಂಖ್ಯೆ | ಹೆಸರು/ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ರದ್ದತಿಗಾಗಿ ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳು |
|---|---|---|
| 1. | ಜೆ.ಎಸ್.ವೆಂಕಟಾದ್ರಿ ಮೈಸೂರು ವಿಭಾಗ ಮೈಸೂರು | ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಹಾಸನ |
| **ರೇಷ್ಮೆ ಉಪ ನಿರ್ದೇಶಕರು** | | |
| 1. | ಸಿ. ನಾರಾಯಣಸ್ವಾಮಿ ಸರ್ಕಾರಿ ರೇಷ್ಮೆ ಕಾರ್ಖಾನೆ, ಸಂತೇಮರಳ್ಳಿ | ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಬೆಂಗಳೂರು |

| ಕ್ರಮ ಸಂಖ್ಯೆ | ಹೆಸರು/ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ರದ್ದತಿಗಾಗಿ ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳು |
|---|---|---|
| 2. | ಮಹಮದ್ ಅತ್ತರ್ ಅಲಿ, ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಮೈಸೂರು. | ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಮೈಸೂರು |
| 3. | ಕೆ.ಎಂ.ಸುಬ್ಬಯ್ಯ ರೇಷ್ಮೆ ವಿನಿಮಯ ಕೇಂದ್ರ ಬೆಂಗಳೂರು | ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಹಾಸನ |

**ರೇಷ್ಮೆ ಸಹಾಯಕ ನಿರ್ದೇಶಕರು**

| | | |
|---|---|---|
| 1. | ವಿ.ಆರ್. ಬಾದಾಮಿ, ರೇಷ್ಮೆ ನೂಲು ಬಿಚ್ಚುವ ಕಿರು ಘಟಕ, ತೋಳಹುಣಸೆ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬೆಳ್ತಂಗಡಿ |
| 2. | ಎಸ್.ಪಿ. ಜಾದವ್, ಜಿಲ್ಲಾ ಪಂಚಾಯತ್, ಶಿರಸಿ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು |
| 3. | ಪಿ.ಡಿ. ಪುಟ್ಟಪ್ಪ, ರೇಷ್ಮೆ ಉಪ ನಿರ್ದೇಶಕರ ಕಛೇರಿ, ಮಂಗಳೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಸಿರಸಿ |
| 4. | ಎ.ಎಲ್. ಏಡ್ರಾವಿ, ರೇಷ್ಮೆ ತರಬೇತಿ ಸಂಸ್ಥೆ, ಕೆ.ಆರ್. ಪೇಟೆ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |

**ರೇಷ್ಮೆ ವಿಸ್ತರಣಾಧಿಕಾರಿ**

| | | |
|---|---|---|
| 1. | ನಾಗರಾಜ್, ರೇಷ್ಮೆ ಗೂಡಿನ ಮಾರುಕಟ್ಟೆ, ಕನಕಪುರ | ತಾಂತ್ರಿಕ ಸೇವಾ ಕೇಂದ್ರ, ಒಡೆಯರಪಾಳ್ಯ |
| 2. | ಹೆಚ್.ಬಿ. ಕೋಳಿವೇರ್, ರೇಷ್ಮೆ ಕೃಷಿ ಕ್ಷೇತ್ರ, ಸಂತೆಮಾವತ್ತೂರು. | ತಾಂತ್ರಿಕ ಸೇವಾ ಕೇಂದ್ರ, ಮಾದನಹಿಪ್ಪರಗ |
| 3. | ಯು. ಕೃಷ್ಣಮೂರ್ತಿ,ಗಿರಿಜನ ರೇಷ್ಮೆ ವಿಸ್ತರಣಾ ಕೇಂದ್ರ, ಪುತ್ತೂರು. | ತಾಂತ್ರಿಕ ಸೇವಾ ಕೇಂದ್ರ, ಹಾನಗಲ್ |
| 4. | ನಂಜುಂಡಸ್ವಾಮಿ, ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ. | ತಾಂತ್ರಿಕ ಸೇವಾ ಕೇಂದ್ರ, ಕೊಡ್ಲಿಪೇಟೆ |

**ಪತ್ರಾಂಕಿತ ವ್ಯವಸ್ಥಾಪಕರು–1**

| | | |
|---|---|---|
| 1. | ಆರ್.ಯು. ಮಹಾಲೆ, ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಮೈಸೂರು. | ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಗುಲ್ಬರ್ಗಾ |

**ಪತ್ರಾಂಕಿತ ವ್ಯವಸ್ಥಾಪಕರು–2**

| | | |
|---|---|---|
| 1. | ಡಿ. ಪ್ರತಿಮಾದೇವಿ ಕೇಂದ್ರ ಕಛೇರಿ, ಬೆಂಗಳೂರು. | ಕೇಂದ್ರ ಕಛೇರಿ, ಬೆಂಗಳೂರು |
| 2. | ಜೋಸೇಫ್ ಲೋಫೇಜ್ ರೇಷ್ಮೆ ಉಪ ನಿರ್ದೇಶಕರ ಕಛೇರಿ, ಧಾರವಾಡ. | ರೇಷ್ಮೆ ಬಿತ್ತನೆ ಕೋಠಿ, ತಾಂಡವಪುರ |

**ಅಧೀಕ್ಷಕರು**

| | | |
|---|---|---|
| 1. | ಕಮಲಾ ಮಂಜುನಾಥ್ ಕೇಂದ್ರ ಕಛೇರಿ, ಬೆಂಗಳೂರು. | ಕೇಂದ್ರ ಕಛೇರಿ, ಬೆಂಗಳೂರು |
| 2. | ಕೆ.ಆರ್. ಶೈಲಜಾ ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಯಲಹಂಕ | ಕೇಂದ್ರ ಕಛೇರಿ, ಬೆಂಗಳೂರು |
| 3. | ಪದ್ಮಾ ಕೇಂದ್ರ ಕಛೇರಿ, ಬೆಂಗಳೂರು. | ಕೇಂದ್ರ ಕಛೇರಿ, ಬೆಂಗಳೂರು |
| 4. | ಸತ್ಯವತಿ, ಕೇಂದ್ರ ಕಛೇರಿ, ಬೆಂಗಳೂರು. | ಕೇಂದ್ರ ಕಛೇರಿ, ಬೆಂಗಳೂರು |
| 5. | ಗಂಗಪ್ಪ ರೇಷ್ಮೆ ಕಾಯಿದೆ ಜಾರಿ ವಿಭಾಗ ಚಿಕ್ಕಬಳ್ಳಾಪುರ | ಕೇಂದ್ರ ಕಛೇರಿ, ಬೆಂಗಳೂರು |
| 6 | ವರದರಾಜು ರೇಷ್ಮೆ ಬಿತ್ತನೆ ಕೋಠಿ, ಚಾಮರಾಜನಗರ. | ಕೇಂದ್ರ ಕಛೇರಿ, ಬೆಂಗಳೂರು |
| 7. | ಕೆ.ಸಿ. ರಾಜಶೇಖರ್ ರೇಷ್ಮೆ ಉಪ ನಿರ್ದೇಶಕರ ಕಛೇರಿ, ಮಾಗಡಿ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಆಳಂದ್ |
| 8. | ಜಿ.ಕೆ. ಜಯಶ್ರೀ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ನಂಜನಗೂಡು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಯಲಹಂಕ |

**ಹಿರಿಯ ರೇಷ್ಮೆ ನಿರೀಕ್ಷಕರು**

| | | |
|---|---|---|
| 1. | ಬಿ. ಭಾಗ್ಯಲಕ್ಷ್ಮಿ ರೇಷ್ಮೆ ಕೃಷಿ ತರಬೇತಿ ಶಾಲೆ, ಚನ್ನಪಟ್ಟಣ. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಬಿಜಾಪುರ |
| 2. | ಆರ್.ಎನ್. ಪಾಟೀಲ್ ರೇಷ್ಮೆ ಕೃಷಿ ಕ್ಷೇತ್ರ, ಗೋಕಾಕ್. | ರೇಷ್ಮೆ ತರಬೇತಿ ಶಾಲೆ, ಚನ್ನಪಟ್ಟಣ |

**ರೇಷ್ಮೆ ನಿರೀಕ್ಷಕರು**

| | | |
|---|---|---|
| 1. | ರಂಗನಾಥಯ್ಯ ರೇಷ್ಮೆ ನಿರ್ದೇಶನಾಲಯ, ಬೆಂಗಳೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಹೊಸಪೇಟೆ (ಖಾಲಿ ಹುದ್ದೆ) |
| 2. | ವಿ.ಆರ್. ಬಿರಾದಾರ್ ತಾಂತ್ರಿಕ ಸೇವಾ ಕೇಂದ್ರ, ಇಂಡಿ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಗಂಗಾವತಿ (ಖಾಲಿ ಹುದ್ದೆ) |
| 3. | ಹೆಚ್.ಬಿ. ಉಸ್ತಾದ್ ಬಿತ್ತನೆ ಕೋಠಿ, ವಿಜಾಪುರ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಲಿಂಗಸುಗೂರು (ಖಾಲಿ ಹುದ್ದೆ) |
| 4. | ಎಸ್. ಶ್ರೀನಿವಾಸ್ ತಾಂತ್ರಿಕ ಸೇವಾ ಕೇಂದ್ರ, ಚುಂಚನಕಟ್ಟೆ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಭದ್ರಾವತಿ. (ಖಾಲಿ ಹುದ್ದೆ) |
| 5. | ಜಿ.ಡಿ. ರಾಯಕರ್ ರೇಷ್ಮೆ ಗೂಡಿನ ಮಾರುಕಟ್ಟೆ, ಶಿರಸಿ | ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ |

| ಕ್ರಮ ಸಂಖ್ಯೆ | ಹೆಸರು/ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ರದ್ದತಿಗಾಗಿ ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳು |
|---|---|---|
| 6. | ಎಸ್.ಎನ್. ಕೆಂಚಲ್ಲನವರ್<br>ತಾಂತ್ರಿಕ ಸೇವಾ ಕೇಂದ್ರ, ಸಿದ್ದಾಪುರ | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 7. | ಹೆಚ್.ಎಂ. ಪೂಜಾರ<br>ಸೋಂಕು ನಿವಾರಣಾ ದಳ, ಸಿದ್ದಾಪುರ | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 8. | ಎನ್.ಕೆ. ಶಂಕರನಾರಾಯಣ ರಾವ್,<br>ತಾಂತ್ರಿಕ ಸೇವಾ ಕೇಂದ್ರ, ಕುಣಿಗಲ್ | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 9. | ಬಿ.ಸಿ. ಮಡ್ಡಿಮನಿ<br>ರೇಷ್ಮೆ ಕೃಷಿ ಕ್ಷೇತ್ರ, ಧಾರವಾಡ | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 10. | ಕೆ.ವಿ. ತಿರುಮಲಮ್ಮ<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಮೈಸೂರು | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 11. | ರಫೀಕ್ ಅಹ್ಮದ್ ಬಿತ್ತನೆ ಕೋಠಿ, ಟಿ. ನರಸೀಪುರ | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 12. | ಎ. ರಾಮಲಿಂಗೇಗೌಡ ಬಿತ್ತನೆ ಕೋಠಿ, ನೆಲಮಂಗಲ | ರೇಷ್ಮೆ ವಿನಿಮಯ ಕೇಂದ್ರ, ಗುಳೇದಗುಡ್ಡ |
| 13. | ಹುಚ್ಚಯ್ಯ ರೇಷ್ಮೆ ತರಬೇತಿ ಶಾಲೆ, ಚನ್ನಪಟ್ಟಣ | ರೇಷ್ಮೆ ವಿನಿಮಯ ಕೇಂದ್ರ, ಕೊಳ್ಳೇಗಾಲ |
| 14. | ರಮೇಶ್ ಮಂಠಾಳಕರ್ ತಾಂತ್ರಿಕ ಸೇವಾ ಕೇಂದ್ರ, ಔರಾದ್ | ರೇಷ್ಮೆ ವಿನಿಮಯ ಕೇಂದ್ರ, ಶಿಡ್ಲಘಟ್ಟ |
| 15. | ಬಾಲರಾಜು. ಬಿ. ರೇಷ್ಮೆ ಕೃಷಿ ಕ್ಷೇತ್ರ, ನಂದಿಹಳ್ಳಿ | ಕೇಂದ್ರ ಕಛೇರಿ, ಬೆಂಗಳೂರು |
| 16. | ಕೆ. ಸಿದ್ದಪ್ಪ<br>ಮಾದರಿ ಚಾಕಿ ಸಾಕಾಣಿಕೆ ಕೇಂದ್ರ, ಎ. ಹೊಸಹಳ್ಳಿ | ಕೇಂದ್ರ ಕಛೇರಿ, ಬೆಂಗಳೂರು |
| 17. | ಪಿ. ಸಂಪತ್ ಕೃಷ್ಣ<br>ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ. | ಕೇಂದ್ರ ಕಛೇರಿ, ಬೆಂಗಳೂರು |
| 18. | ಸಿ.ಬಿ. ದಶರಥರಾವ್<br>ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ. | ಕೇಂದ್ರ ಕಛೇರಿ, ಬೆಂಗಳೂರು |
| 19. | ಕೆಂಪಸಿದ್ದಯ್ಯ ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ | ಕೇಂದ್ರ ಕಛೇರಿ, ಬೆಂಗಳೂರು |
| 20. | ಮಹಮದ್ ಖಲೀಮುಲ್ಲಾ<br>ತಾಂತ್ರಿಕ ಸೇವಾ ಕೇಂದ್ರ, ಗೌರಿಬಿದನೂರು | ಕೇಂದ್ರ ಕಛೇರಿ, ಬೆಂಗಳೂರು |
| 21. | ಬಿ. ಸೂರ್ಯನಾರಾಯಣರಾವ್<br>ತಾಂತ್ರಿಕ ಸೇವಾ ಕೇಂದ್ರ, ದೊಡ್ಡಮರಳವಾಡಿ | ರೇಷ್ಮೆ ಗೂಡಿನ ಮಾರುಕಟ್ಟೆ, ಅತ್ತಿಬೆಲೆ |
| 22. | ಐ.ವೈ. ಹೊಳೆಯಾಚೆ ತಾಂತ್ರಿಕ ಸೇವಾ ಕೇಂದ್ರ, ಮೂಗೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಸರ್ಜಾಪುರ |
| 23. | ಎಸ್. ಸುಬ್ಬಪ್ಪ ಬಿತ್ತನೆ ಕೋಠಿ, ಗುಂಡ್ಲುಪೇಟೆ | ರೇಷ್ಮೆ ಗೂಡಿನ ಮಾರುಕಟ್ಟೆ, ಬೆಂಗಳೂರು |
| 24. | ಎನ್. ನಾಗೇಶ್<br>ರೇಷ್ಮೆ ಗೂಡಿನ ಮಾರುಕಟ್ಟೆ, ಟಿ. ನರಸೀಪುರ | ರೇಷ್ಮೆ ಗೂಡಿನ ಮಾರುಕಟ್ಟೆ, ಚನ್ನಪಟ್ಟಣ |
| 25. | ಹೆಚ್.ಎಫ್. ಮಳಲಿ ಬಿತ್ತನೆ ಕೋಠಿ, ಚದಲಪುರ | ರೇಷ್ಮೆ ಗೂಡಿನ ಮಾರುಕಟ್ಟೆ, ಚನ್ನಪಟ್ಟಣ |
| 26. | ಬಿ. ಮಂಜುನಾಥ ಪ್ರಸಾದ್<br>ತಾಂತ್ರಿಕ ಸೇವಾ ಕೇಂದ್ರ, ಹೊನ್ನೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಚನ್ನಪಟ್ಟಣ. |
| 27. | ಎಲ್. ರಾಜು ಬಿತ್ತನೆ ಕೋಠಿ, ಚಾಮರಾಜನಗರ | ರೇಷ್ಮೆ ಗೂಡಿನ ಮಾರುಕಟ್ಟೆ, ವಿಜಯಪುರ |
| 28. | ಎಸ್. ಸತ್ಯನಾರಾಯಣ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಮೈಸೂರು | ರೇಷ್ಮೆ ಗೂಡಿನ ಮಾರುಕಟ್ಟೆ, ವಿಜಯಪುರ |
| 29. | ಕೆ.ಎಸ್. ರಾಮಮೂರ್ತಿ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಮೈಸೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಕನಕಪುರ |
| 30. | ಸಿ.ಬಿ.ರತ್ನಾಕರ ತಾಂತ್ರಿಕ ಸೇವಾ ಕೇಂದ್ರ, ಬನ್ನೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಕನಕಪುರ |
| 31. | ಎಲ್. ವೆಂಕಟಗಿರಿ<br>ತಾಂತ್ರಿಕ ಸೇವಾ ಕೇಂದ್ರ, ರಾಮನಗರ | ತಾಂತ್ರಿಕ ಸೇವಾ ಕೇಂದ್ರ (ರೀಲಿಂಗ್), ರಾಮನಗರ |
| 32. | ಹೆಚ್.ಎಂ. ಡಿಂಡಿಮಭೂಷಣ<br>ತಾಂತ್ರಿಕ ಸೇವಾ ಕೇಂದ್ರ, ಕೆ.ಆರ್.ನಗರ | ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ |
| 33. | ಸಿ.ಸೀತಾರಾಮಯ್ಯ ಕೇಂದ್ರ ಕಛೇರಿ, ಬೆಂಗಳೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಬೆಳಗಾವಿ |
| 34. | ಕೆ.ಟಿ.ರಾಮಮೋಹನ್ ಅರಸ್<br>ತಾಂತ್ರಿಕ ಸೇವಾ ಕೇಂದ್ರ, ಚಿಕ್ಕಮಗಳೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಬೆಳಗಾವಿ |
| 35. | ನಿಂಗರಾಜಯ್ಯ ತಾಂತ್ರಿಕ ಸೇವಾ ಕೇಂದ್ರ, ಕೊರಟಗೆರೆ | ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ |
| 36. | ಕೆ.ಎಸ್. ಕಾಂಬಳೆ ರೇಷ್ಮೆ ಗೂಡಿನ ಮಾರುಕಟ್ಟೆ, ಜೇವರ್ಗಿ | ರೇಷ್ಮೆ ಗೂಡಿನ ಮಾರುಕಟ್ಟೆ, ದಾವಣಗೆರೆ |
| 37. | ಚಿ. ಮೂಡ್ಲಿಗೌಡ ರೇಷ್ಮೆ ಕೃಷಿ ಕ್ಷೇತ್ರ, ಹುಚ್ಚಗೊಂಡನಹಳ್ಳಿ | ರೇಷ್ಮೆ ಗೂಡಿನ ಮಾರುಕಟ್ಟೆ, ಹುಬ್ಬಳ್ಳಿ |
| 38. | ಎಸ್.ಆರ್. ಕರನೇಸರ. ಬಿತ್ತನೆ ಕೋಠಿ, ಪಾವಗಡ | ರೇಷ್ಮೆ ಗೂಡಿನ ಮಾರುಕಟ್ಟೆ, ಹಾಸನ |
| 39. | ಜಿ.ಬಿ. ಹನುಮಂತರಾಯಪ್ಪ.<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಕುಣಿಗಲ್ | ರೇಷ್ಮೆ ಗೂಡಿನ ಮಾರುಕಟ್ಟೆ, ಕೋಲಾರ |

| ಕ್ರಮ ಸಂಖ್ಯೆ | ಹೆಸರು/ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ರದ್ದತಿಗಾಗಿ ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳು |
|---|---|---|
| 40. | ಡಿ.ಆರ್. ಸತ್ಯನಾರಾಯಣ, ತಾಂತ್ರಿಕ ಸೇವಾ ಕೇಂದ್ರ, ಸಂತಿಕೋಡಿಹಳ್ಳಿ. | ರೇಷ್ಮೆ ಗೂಡಿನ ಮಾರುಕಟ್ಟೆ, ಕೋಲಾರ |
| 41. | ಬಿ.ಎಂ. ಹಾವಿನಾಳ ರೇಷ್ಮೆ ಕೃಷಿ ಕ್ಷೇತ್ರ, ಹಾವೇರಿ. | ರೇಷ್ಮೆ ಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ |
| 42. | ಜಿ. ಗವಿಯಪ್ಪ ಮಾದರಿ ಚಾಕಿ ಸಾಕಾಣಿಕಾ ಕೇಂದ್ರ, ಬೈಚೇನಹಳ್ಳಿ | ರೇಷ್ಮೆ ಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ |
| 43. | ಜಿ.ಎನ್. ಅಶ್ವಥ ರೆಡ್ಡಿ, ರೇಷ್ಮೆ ಕೃಷಿ ಕ್ಷೇತ್ರ, ಕರೆಕಲಹಳ್ಳಿ. | ರೇಷ್ಮೆ ಗೂಡಿನ ಮಾರುಕಟ್ಟೆ, ಕೆ.ಆರ್.ಪೇಟೆ |
| 44. | ಮಲ್ಲಪ್ಪ ಗಜ್ಜರಿ, ತಾಂತ್ರಿಕ ಸೇವಾ ಕೇಂದ್ರ, ಆಲೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಮಳವಳ್ಳಿ |
| 45. | ಟಿ.ಎಂ. ಬಸವರಾಜು, ತಾಂತ್ರಿಕ ಸೇವಾ ಕೇಂದ್ರ, ಪೂರಿಗಾಲಿ. | ರೇಷ್ಮೆ ಗೂಡಿನ ಮಾರುಕಟ್ಟೆ, ಶಿವಮೊಗ್ಗ |
| 46. | ಎಸ್. ನಾಗರಾಜ. ರೇಷ್ಮೆ ವಿನಿಮಯ ಕೇಂದ್ರ, ಕೊಳ್ಳೇಗಾಲ. | ರೇಷ್ಮೆ ಕೃಷಿ ಕ್ಷೇತ್ರ, ಶ್ರೀಧರಗುಡ್ಡ |
| 47 | ಎ.ಹೆಚ್.ನಾಯಕವಾಡಿ ರೇಷ್ಮೆ ಕೃಷಿ ಕ್ಷೇತ್ರ ಐನಾಪುರ | ರೇಷ್ಮೆ ಕೃಷಿ ಕ್ಷೇತ್ರ ಶ್ರೀಧರಗುಡ್ಡ |
| 48 | ಬಿ.ಎನ್.ಸೊಂಡಿ ರೇಷ್ಮೆ ಕೃಷಿ ಕ್ಷೇತ್ರ ಚಿಕ್ಕೊಪ್ಪ | ರೇಷ್ಮೆ ಕೃಷಿ ಕ್ಷೇತ್ರ ಸಿಂಧಗಿ |
| 49 | ಕೆ.ವೈ. ಹಿರೇಭೀಮಣ್ಣನವರ್ ರೇಷ್ಮೆ ಕೃಷಿ ಕ್ಷೇತ್ರ ಬಿ.ಆರ್.ಟಿ.ಕಾಲೋನಿ | ರೇಷ್ಮೆ ಕೃಷಿ ಕ್ಷೇತ್ರ ಸಿಂಧಗಿ |

**ರೇಷ್ಮೆ ಪ್ರದರ್ಶಕರು**

| | | |
|---|---|---|
| 1. | ಎಂ.ಹೆಚ್. ಗುಡಿಗೇರಿ. ತಾಂತ್ರಿಕ ಸೇವಾ ಕೇಂದ್ರ, ಸವಣೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಲಿಂಗಸುಗೂರು |
| 2. | ಎಸ್. ನಾಗರಾಜು. ಗಿರಿಜನ ಕಾಲೋನಿ, ಮಗ್ಗಲಮಕ್ಕಿ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 3. | ಹೆಚ್. ಪರಮೇಶ್ವರಪ್ಪ. ತಾಂತ್ರಿಕ ಸೇವಾ ಕೇಂದ್ರ, ಕೊಪ್ಪ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 4. | ಟಿ.ಎನ್. ಯತಿರಾಜು. ತಾಂತ್ರಿಕ ಸೇವಾ ಕೇಂದ್ರ, ನರಸಿಂಹರಾಜಪುರ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 5. | ಕೆ. ಚಿಂದಾನಂದ. ಸೀಡ್ ಲೆಜೆಸ್ಲೇಷನ್, ಕೆಂಪನಹಳ್ಳಿ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 6. | ಕೆ.ಎನ್. ಕೃಷ್ಣಪ್ಪ. ಗಿರಿಜನ ಕಾಲೋನಿ, ಸೋಮವಾರಪೇಟೆ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 7. | ಡಿ.ಎನ್. ಕೆಂಪೇಗೌಡ. ರೇಷ್ಮೆ ಗೂಡಿನ ಮಾರುಕಟ್ಟೆ, ಕನಕಪುರ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 8. | ಹೆಚ್.ಐ. ಭಗವಾನ್. ಬಿತ್ತನೆ ಕೋಠಿ, ರಾಯಪುರ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 9. | ಎಂ. ಶಾಂತರಾಜು. ತಾಂತ್ರಿಕ ಸೇವಾ ಕೇಂದ್ರ, ಪಾಂಡವಪುರ. | ಕೇಂದ್ರ ಕಛೇರಿ, ಬೆಂಗಳೂರು |
| 10. | ಪಿ.ಎಂ. ಗುಮಾತೆ. ತಾಂತ್ರಿಕ ಸೇವಾ ಕೇಂದ್ರ, ಕುಣಿಗಲ್. | ಕೇಂದ್ರ ಕಛೇರಿ, ಬೆಂಗಳೂರು. |
| 11. | ಕೆ. ಚಂದ್ರಶೇಖರ್. ತಾಂತ್ರಿಕ ಸೇವಾ ಕೇಂದ್ರ, ಕಡೂರು. | ಕೇಂದ್ರ ಕಛೇರಿ, ಬೆಂಗಳೂರು |
| 12. | ದಕ್ಷಿಣಾಚಾರಿ. ರೇಷ್ಮೆ ಕೃಷಿ ಕ್ಷೇತ್ರ, ರುದ್ರಪಟ್ಟಣ. | ಕೇಂದ್ರ ಕಛೇರಿ, ಬೆಂಗಳೂರು |
| 13. | ಸುಧಾಕರ್. ರೇಷ್ಮೆ ತರಬೇತಿ ಶಾಲೆ, ಚನ್ನಪಟ್ಟಣ. | ಕೇಂದ್ರ ಕಛೇರಿ, ಬೆಂಗಳೂರು |
| 14. | ನಸೀರ್ ಅಹ್ಮದ್ ತಾಂತ್ರಿಕ ಸೇವಾ ಕೇಂದ್ರ, ಬೂಕನಕೆರೆ. | ಕೇಂದ್ರ ಕಛೇರಿ, ಬೆಂಗಳೂರು |
| 15. | ಬಿ.ಎ. ಮಗದಮ್. ತಾಂತ್ರಿಕ ಸೇವಾ ಕೇಂದ್ರ, ಗೋಕಾಕ್. | ರೇಷ್ಮೆ ನೂಲು ಬಿಚ್ಚುವ ಕಿರು ಘಟಕ, ಹುಮ್ನಾಬಾದ್ |
| 16. | ಜನಾರ್ಧನ ರೆಡ್ಡಿ. ತಾಂತ್ರಿಕ ಸೇವಾ ಕೇಂದ್ರ, ಮಾನ್ವಿ. | ರೇಷ್ಮೆ ನೂಲು ಬಿಚ್ಚುವ ಕಿರು ಘಟಕ, ಗುಲ್ಬರ್ಗಾ |
| 17. | ಎಸ್.ಎಸ್. ಕಾಮ. ತಾಂತ್ರಿಕ ಸೇವಾ ಕೇಂದ್ರ, ಹಗರಿಬೊಮ್ಮನಹಳ್ಳಿ. | ರೇಷ್ಮೆ ನೂಲು ಬಿಚ್ಚುವ ಕಿರು ಘಟಕ, ಕೆಸರಟ್ಟಿ |
| 18. | ಡಿ. ಫ್ರೀಡಾ, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಬೆಂಗಳೂರು |
| 19. | ಡಿ.ಆರ್.ಜಿ.ಪಿ. ಗ್ರೇಸ್, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಚನ್ನಪಟ್ಟಣ |
| 20. | ವಿ.ಕೆ. ಹಡಪದ ತಾಂತ್ರಿಕ ಸೇವಾ ಕೇಂದ್ರ, ಗದಗ. | ರೇಷ್ಮೆ ಗೂಡಿನ ಮಾರುಕಟ್ಟೆ, ಚನ್ನಪಟ್ಟಣ |
| 21. | ಎಂ. ಮಹಾದೇವನ್, ತಾಂತ್ರಿಕ ಸೇವಾ ಕೇಂದ್ರ, ಬನ್ನೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ವಿಜಯಪುರ |
| 22. | ಎ.ಡಿ. ಕಾಳೆ, ತಾಂತ್ರಿಕ ಸೇವಾ ಕೇಂದ್ರ, ಹಿರೇಕೆರೂರ್. | ರೇಷ್ಮೆ ಗೂಡಿನ ಮಾರುಕಟ್ಟೆ, ವಿಜಯಪುರ. |
| 23. | ಎ.ವಿ. ಜಾಂಬೇಕರ್, ರೇಷ್ಮೆ ಕೃಷಿ ಕ್ಷೇತ್ರ, ಹಿರೇಕೆರೂರ್. | ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ |
| 24. | ಪರಮೇಶ್ವರಪ್ಪ, ತಾಂತ್ರಿಕ ಸೇವಾ ಕೇಂದ್ರ, ಹುಲೇಕಲ್. | ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ |
| 25. | ಎಸ್.ಎಂ. ಕುಮಾರಸ್ವಾಮಿ, ತಾಂತ್ರಿಕ ಸೇವಾ ಕೇಂದ್ರ, ಅರಸೀಕೆರೆ. | ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ |
| 26. | ಉಮಾಭಾಯಿ, ರೇಷ್ಮೆ ಉಪ ನಿರ್ದೇಶಕರ ಕಛೇರಿ, ಮಂಗಳೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ |
| 27. | ಎಸ್. ಬಸವನಾಯಕ್ ರೇಷ್ಮೆ ಗೂಡಿನ ಮಾರುಕಟ್ಟೆ, ಸಂತೇಮರನಹಳ್ಳಿ. | ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ |
| 28. | ಡಿ.ಹೆಚ್. ಮಂಜುನಾಥ್, ವಿಸ್ತರಣಾ ಚಾಕಿ ಕೇಂದ್ರ, ತರೀಕೆರೆ. | ರೇಷ್ಮೆ ಗೂಡಿನ ಮಾರುಕಟ್ಟೆ, ಚಿತ್ರದುರ್ಗ |

| ಕ್ರಮ ಸಂಖ್ಯೆ | ಹೆಸರು/ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ರದ್ದತಿಗಾಗಿ ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳು |
|---|---|---|
| 29. | ಎಂ. ಹರಿಶಂಕರ್, ತಾಂತ್ರಿಕ ಸೇವಾ ಕೇಂದ್ರ, ಬನ್ನಿಕುಪ್ಪೆ. | ರೇಷ್ಮೆ ಗೂಡಿನ ಮಾರುಕಟ್ಟೆ, ಚಿತ್ರದುರ್ಗ |
| 30. | ಸಿ. ಶೇಷಾದ್ರಿ, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಹಾಸನ |
| 31. | ಪಿ.ಬಿ. ಕುಲಕರ್ಣಿ,<br>ಸರ್ಕಾರಿ ಮಾದರಿ ಬಿತ್ತನೆ ಕೋಠಿ, ತುಮಕೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಹಾಸನ |
| 32. | ಆರ್.ಆರ್. ಕುಲಕರ್ಣಿ,<br>ತಾಂತ್ರಿಕ ಸೇವಾ ಕೇಂದ್ರ, ಹೊಳವನಹಳ್ಳಿ. | ರೇಷ್ಮೆ ಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ |
| 33. | ಹೆಚ್.ಜೆ. ಲಕ್ಷ್ಮೀನಾರಾಯಣ, ಕೇಂದ್ರ ಕಛೇರಿ, ಬೆಂಗಳೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ |
| 34. | ಆರ್.ಸಿ. ಬಿಸಿಲಹಳ್ಳಿ, ರೇಷ್ಮೆ ಕೃಷಿ ಕ್ಷೇತ್ರ, ಹಿರೇಕೆರೂರ್. | ರೇಷ್ಮೆ ಕೃಷಿ ಕ್ಷೇತ್ರ, ಚಿಕ್ಕೊಪ್ಪ |
| 35. | ವಿ.ಎಸ್. ಕೊಣಸಾಲೆ,<br>ತಾಂತ್ರಿಕ ಸೇವಾ ಕೇಂದ್ರ, ಮುಂಡಗೋಡ್. | ರೇಷ್ಮೆ ಕೃಷಿ ಕ್ಷೇತ್ರ, ಚಿಕ್ಕೊಪ್ಪ |
| 36. | ಪಿ.ಎನ್. ನಾಡಿಗೇರ್, ರೇಷ್ಮೆ ಕೃಷಿ ಕ್ಷೇತ್ರ, ಚಿಕ್ಕೊಪ್ಪ | ಗಿರಿಜನ ಕಾಲೋನಿ ಮಗ್ಗಲಮಕ್ಕಿ |
| 37. | ಸಿ.ಡಿ. ನಡಗಟ್ಟಿ, ತಾಂತ್ರಿಕ ಸೇವಾ ಕೇಂದ್ರ, ಹಿರಿಯೂರು. | ಗಿರಿಜನ ಕಾಲೋನಿ ಬೆಟ್ಟದಮನೆ |
| 38. | ಎಂ.ಆರ್.ಶ್ರೀನಿವಾಸ ರಾಘವನ್ ಕೇಂದ್ರ ಕಛೇರಿ, ಬೆಂಗಳೂರು. | ಗಿರಿಜನ ಕಾಲೋನಿ ಸೋಮವಾರಪೇಟೆ |
| 39. | ಡಿ.ಬೋಜೇಗೌಡ ತಾಂತ್ರಿಕ ಸೇವಾ ಕೇಂದ್ರ, ಸಿರಾ | ಗಿರಿಜನ ಕಾಲೋನಿ ಅಮಾಸೆಬೈಲು |
| 40. | ಕೆ.ಎಸ್. ಆನಂದ್, ತಾಂತ್ರಿಕ ಸೇವಾ ಕೇಂದ್ರ, ವಕ್ಕಲೇರಿ. | ರೇಷ್ಮೆ ಕೃಷಿ ಕ್ಷೇತ್ರ, ಕಣ್ವ |
| 41. | ಎ. ಜಫ್ರುಲ್ಲಾಖಾನ್,<br>ತಾಂತ್ರಿಕ ಸೇವಾ ಕೇಂದ್ರ, ಶ್ರೀನಿವಾಸಪುರ. | ರೇಷ್ಮೆ ಕೃಷಿ ಕ್ಷೇತ್ರ, ಹಿಡಕಲ್ |

**ರೇಷ್ಮೆ ಪ್ರವರ್ತಕರು**

| | | |
|---|---|---|
| 1. | ಎ. ವಿಮಲ. ರೇಷ್ಮೆ ಬಿತ್ತನೆ ಕೋಠಿ, ಮೈಸೂರು. | ರೇಷ್ಮೆ ಕೃಷಿ ಕ್ಷೇತ್ರ, ಬೈಲಹೊಂಗಲ |
| 2. | ವೆಂಕಟೇಶಯ್ಯ. ರೇಷ್ಮೆ ಬಿತ್ತನೆ ಕೋಠಿ, ಚಾಮರಾಜನಗರ. | ರೇಷ್ಮೆ ಕೃಷಿ ಕ್ಷೇತ್ರ, ಹಿಂಡಲಗ |
| 3. | ಸೈಯದ್ ಮಹಮದ್ ಅರೀಫ್ ಪಾಷಾ<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಬೀದರ್. | ಚಾಕಿ ಸಾಕಾಣಿಕಾ ಕೇಂದ್ರ, ಹಾರೋಗೇರಿ |
| 4. | ಆರ್.ಎನ್. ಮೆಡಗಾರ<br>ಮಾದರಿ ಚಾಕಿ ಸಾಕಾಣಿಕಾ ಕೇಂದ್ರ, ಜೇವರ್ಗಿ. | ಚಾಕಿ ಸಾಕಾಣಿಕಾ ಕೇಂದ್ರ, ನಾಗನೂರು |
| 5. | ಬಿ. ಮರಿಸ್ವಾಮಿ<br>ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ನೆಲಮಂಗಲ. | ಚಾಕಿ ಸಾಕಾಣಿಕಾ ಕೇಂದ್ರ, ತೆಳ್ಳನೂರು,<br>ಚಾಮರಾಜನಗರ ತಾಲ್ಲೂಕು |
| 6. | ಡಿ.ಎನ್. ಬಡಿಗೇರ<br>ರೇಷ್ಮೆ ಬಿತ್ತನೆ ಕೋಠಿ, ಹಾವೇರಿ. | ಚಾಕಿ ಸಾಕಾಣಿಕಾ ಕೇಂದ್ರ, ತೆಲ್ಲನೂರು, ಕೊಳ್ಳೇಗಾಲ<br>ತಾಲ್ಲೂಕು |

**ಶೀಘ್ರಲಿಪಿಗಾರರು**

| | | |
|---|---|---|
| 1. | ಎಸ್. ಕೇಶವನ್<br>ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಮೈಸೂರು. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |

**ಪ್ರಥಮ ದರ್ಜೆ ಸಹಾಯಕರು**

| | | |
|---|---|---|
| 1. | ಎಂ. ಶಶಿಕಲಾ<br>ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಮೈಸೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಗೋಕಾಕ್ |
| 2. | ಬನಶಂಕರಮ್ಮ.<br>ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಮೈಸೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ,<br>ಚಾಮರಾಜನಗರ |
| 3. | ಶ್ರೀನಿವಾಸ ಮೂರ್ತಿ. ರೇಷ್ಮೆ ಕಾಯ್ದೆ ಜಾರಿ ವಿಭಾಗ<br>ಬೆಂಗಳೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ,<br>ಚಿಕ್ಕಮಗಳೂರು |
| 4. | ಹೆಚ್.ವಿ. ಗೋವಿಂದಯ್ಯ, ರೇಷ್ಮೆ ಸಹಾಯಕ ನಿರ್ದೇಶಕರ<br>ಕಛೇರಿ, ದೊಡ್ಡಬಳ್ಳಾಪುರ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ,<br>ಲಿಂಗಸುಗೂರು |
| 5. | ಕೆ.ಎಸ್. ಸುಂದರೇಶಾ.<br>ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಶಿವಮೊಗ್ಗ |
| 6. | ಬಸವಪ್ಪ. ರೇಷ್ಮೆ ಗೂಡು ಮಾರುಕಟ್ಟೆ, ಶಿವಮೊಗ್ಗ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಶಿವಮೊಗ್ಗ |
| 7. | ದೇವಪ್ಪ ನಡಹಟ್ಟಿ.<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ರಾಯಚೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ (ಜಿ.ಪಂ),<br>ಶಿರಸಿ |
| 8. | ಈಶ್ವರಯ್ಯ. ಕೇಂದ್ರ ಕಛೇರಿ, ಬೆಂಗಳೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ (ಜಿ.ಪಂ),<br>ಶಿರಸಿ |
| 9. | ಎಂ. ಕಾಣಿಕ್‌ರಾಜ್. ಕೇಂದ್ರ ಕಛೇರಿ, ಬೆಂಗಳೂರು. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬೆಳಗಾಂ |
| 10. | ಕೆ. ಜಯಪ್ರಕಾಶ್. ಮೇಲ್ವಿಚಾರಣಾ ದಳ, ಬೆಂಗಳೂರು. | ರೇಷ್ಮೆ ಉಪ ನಿರ್ದೇಶಕರ ಕಛೇರಿ (ಜಿ.ಪಂ),<br>ಬಳ್ಳಾರಿ |
| 11. | ಟಿ.ಆರ್. ಪ್ರಕಾಶ್.<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಚಿಕ್ಕಮಗಳೂರು. | ರೇಷ್ಮೆ ಉಪ ನಿರ್ದೇಶಕರ ಕಛೇರಿ (ಜಿ.ಪಂ),<br>ಧಾರವಾಡ |

| ಕ್ರಮ ಸಂಖ್ಯೆ | ಹೆಸರು/ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ರದ್ದತಿಗಾಗಿ ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳು |
|---|---|---|
| 12. | ಶೇಖಖೊಂಡು.<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಗೋಕಾಕ್. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಗದಗ |
| 13. | ಪಿ.ಡಿ. ದೇಶ್‌ಪಾಂಡೆ.<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಧಾರವಾಡ. | ರೇಷ್ಮೆ ಉಪ ನಿರ್ದೇಶಕರ ಕಛೇರಿ (ಜಿ.ಪಂ), ಹಾವೇರಿ |
| 14. | ಡಿ.ಆರ್. ಪೂಜಾರಿ.<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಗೋಕಾಕ್. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಕೋಲಾರ |
| 15. | ಕೆ.ಬಿ. ಕಮಲಾ.<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಚಾಮರಾಜನಗರ. | ರೇಷ್ಮೆ ಉಪ ನಿರ್ದೇಶಕರ ಕಛೇರಿ (ಜಿ.ಪಂ), ಮಂಡ್ಯ |
| 16. | ಹೆಚ್.ಕೆ. ಮುಗಳಿ.<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಧಾರವಾಡ. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಶಿವಮೊಗ್ಗ |
| 17. | ಚಂದ್ರಶೇಖರಯ್ಯ.<br>ಮಾದರಿ ಬಿತ್ತನೆ ಕೋಠಿ, ತುಮಕೂರು. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಶಿವಮೊಗ್ಗ |
| 18. | ಬಿ. ಶಂಕರಪ್ಪ.<br>ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಬೆಳಗಾಂ |
| 19. | ಎನ್. ಗೋಪಾಲ್ ರಾವ್.<br>ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, 1ನೇ ವಿಭಾಗ, ರೇಷ್ಮೆ ಭವನ, ಬೆಂಗಳೂರು. | ರೇಷ್ಮೆ ಗೂಡಿನ ಮಾರುಕಟ್ಟೆ, ಚನ್ನಪಟ್ಟಣ |
| 20. | ಎನ್.ಎಸ್. ಮುರಳಿಧರ್,<br>ರೇಷ್ಮೆ ಗೂಡಿನ ಮಾರುಕಟ್ಟೆ, ತುಮಕೂರು. | ಕಾಮಗಾರಿ ಕೋಶ, ಬೆಂಗಳೂರು |
| 21. | ಕೆ. ಅಬ್ದುಲ್ ಹಮೀದ್, ಕೇಂದ್ರ ಕಛೇರಿ, ಬೆಂಗಳೂರು. | ಕೇಂದ್ರ ಕಛೇರಿ, ಬೆಂಗಳೂರು |
| 22. | ಕೆ.ಸಿ. ವಿಜಯ, ಮಾದರಿ ಬಿತ್ತನೆ ಕೋಠಿ, ಮಂಡ್ಯ. | ಕೇಂದ್ರ ಕಛೇರಿ, ಬೆಂಗಳೂರು |

**ದ್ವಿತೀಯ ದರ್ಜೆ ಸಹಾಯಕರು**

| | | |
|---|---|---|
| 1. | ಎಸ್.ವಿ. ನಂಜುಂಡಪ್ಪ.<br>ಮಾದರಿ ಬಿತ್ತನೆ ಕೋಠಿ, ಚದಲಪುರ. | ರೇಷ್ಮೆ ಉಪ ನಿರ್ದೇಶಕರ ಕಛೇರಿ (ಜಿ.ಪಂ), ತುಮಕೂರು |
| 2. | ಕೆ.ಎನ್. ಗಣಪತಿ.<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ರಾಯಚೂರು | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 3. | ರಮೀಜಾ ಅಕ್ತಾರ್. ಕೇಂದ್ರ ಕಛೇರಿ, ಬೆಂಗಳೂರು. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಬಾಗಲಕೋಟೆ |
| 4. | ಎಂ. ಮ್ಯಾಥ್ಯೂ, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ರಾಯಚೂರು |

**ಬೆರಳಚ್ಚುಗಾರರು**

| | | |
|---|---|---|
| 1. | ಬಿ.ಜಿ. ಗಂಗಮ್ಮ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಕುಣಿಗಲ್. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಶಿರಸಿ |

**ವಾಹನ ಚಾಲಕರು**

| | | |
|---|---|---|
| 1. | ಎ.ಎನ್. ಅಥಣಿ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬಿಜಾಪುರ | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬಳ್ಳಾರಿ |
| 2. | ಎನ್.ಎಂ. ರಿಸಾಲ್ದಾರ್<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಹಾವೇರಿ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಲಿಂಗಸುಗೂರು |
| 3. | ಕೆ. ಅನ್ಬು ತಾಂತ್ರಿಕ ಸೇವಾ ಕೇಂದ್ರ, ವಿಜಯಪುರ. | ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಮೈಸೂರು |
| 4. | ರಾಬರ್ಟ್ ಫೆರೆರಾ<br>ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 5. | ಆರ್.ಎಂ. ಗುಳೇದಗುಡ್ಡ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಹುಬ್ಬಳ್ಳಿ | ತಾಂತ್ರಿಕ ಸೇವಾ ಕೇಂದ್ರ, ಹೂವಿನಹಡಗಲಿ |
| 6. | ಎಸ್.ಎಲ್. ಗಂಗಪ್ಪ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಶಿವಮೊಗ್ಗ. | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಬಿಜಾಪುರ |
| 7. | ಬಿ.ಎಂ. ಮಂಜಯ್ಯ,<br>ರೇಷ್ಮೆ ಉಪ ನಿರ್ದೇಶಕರ ಕಛೇರಿ, ಶಿವಮೊಗ್ಗ | ತಾಂತ್ರಿಕ ಸೇವಾ ಕೇಂದ್ರ, ಕೊಳ್ಳೇಗಾಲ |
| 8. | ತಿಮ್ಮಾರೆಡ್ಡಿ,<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಮಧುಗಿರಿ | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಕೋಲಾರ |

**ಅನುಚರರು**

| | | |
|---|---|---|
| 1. | ವೈ. ಶಾಂತಕುಮಾರಿ<br>ರೇಷ್ಮೆ ಗೂಡಿನ ಮಾರುಕಟ್ಟೆ, ವಿಜಯಪುರ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 2. | ಬಿ.ಬಿ. ರಾಜಶೇಖರ್<br>ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ. | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |

| ಕ್ರಮ ಸಂಖ್ಯೆ | ಹೆಸರು/ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ರದ್ದತಿಗಾಗಿ ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳು |
|---|---|---|
| 3. | ಕೆ. ಕಾಳಚಾರ್ ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಟಿ. ನರಸೀಪುರ |
| 4. | ಕೆ.ಹೆಚ್. ಬಸವೇಗೌಡ<br>ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಟಿ. ನರಸೀಪುರ |

**ತೂಕ ಮಾಡುವವರು**

| | | |
|---|---|---|
| 1. | ಬಿ.ಜಿ. ಕೃಷ್ಣಮೂರ್ತಿ<br>ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 2. | ಗಂಗನಾಯಕ ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |
| 3. | ರಾಮಕೃಷ್ಣ ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು | ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು |

**ಡಿ ಗ್ರೂಪ್ ನೌಕರರು**

| | | |
|---|---|---|
| 1. | ಎಸ್.ಎಫ್. ಕಾತರಕಿ<br>ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಹಾವೇರಿ | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬಳ್ಳಾರಿ |
| 2. | ಅರುಣ ರೇಷ್ಮೆ ನಿರ್ದೇಶನಾಲಯ, ಬೆಂಗಳೂರು | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬಳ್ಳಾರಿ |
| 3. | ಎಸ್. ನಂಜುಂಡಯ್ಯ<br>ರೇಷ್ಮೆ ಬಿತ್ತನೆ ಕೋಠಿ, ಪಾವಗಡ. | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಬೆಳಗಾವಿ |
| 4. | ಟಿ.ವಿ ಚಂದ್ರಶೇಖರ್<br>ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಇಂಡಿ |
| 5. | ಕೋದಂಡಪ್ಪ ತಾಂತ್ರಿಕ ಸೇವಾ ಕೇಂದ್ರ, ಯಲ್ಬುರ್ಗಾ | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಕೊಳ್ಳೇಗಾಲ |
| 6. | ನರಸಿಂಹಮೂರ್ತಿ ಕೇಂದ್ರ ಕಛೇರಿ, ಬೆಂಗಳೂರು | ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ರಾಣಿಬೆನ್ನೂರು |
| 07. | ಎಂ. ಗೋವಿಂದಪ್ಪ<br>ರೇಷ್ಮೆ ಬಿತ್ತನೆ ಕೋಠಿ, ಬೇತಮಂಗಲ | ರೇಷ್ಮೆ ಉಪ ನಿರ್ದೇಶಕರ ಕಛೇರಿ, ಬಳ್ಳಾರಿ |
| 08. | ಎ.ಎಂ. ಯಮನಪ್ಪ, ರೇಷ್ಮೆ ಕೃಷಿ ಕ್ಷೇತ್ರ, ಕೋಳಗಲು | ರೇಷ್ಮೆ ನೂಲು ಬಿಚ್ಚುವ ಕಿರು ಘಟಕ ತೋಳಹುಣಸೆ |
| 09. | ಜಿ.ವೈ. ಉಡಕೇರಿ, ರೇಷ್ಮೆ ಕೃಷಿ ಕ್ಷೇತ್ರ, ರಾಣಿಬೆನ್ನೂರು | ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ |

**ವಿ. ಹರಿಹರನ್**

ಪೀಠಾಧಿಕಾರಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ (ರೇಷ್ಮೆ)

**ಘೋಷ್ವಾರೆ**

| | | |
|---|---|---|
| 1 | ರೇಷ್ಮೆ ಜಂಟಿ ನಿರ್ದೇಶಕರು | 01 |
| 2 | ರೇಷ್ಮೆ ಉಪನಿರ್ದೇಶಕರು | 03 |
| 3 | ರೇಷ್ಮೆ ಸಹಾಯಕ ನಿರ್ದೇಶಕರು | 04 |
| 4 | ರೇಷ್ಮೆ ವಿಸ್ತರಣಾಧಿಕಾರಿಗಳು | 04 |
| 5 | ಹಿರಿಯ ರೇಷ್ಮೆ ನಿರೀಕ್ಷಕರು | 02 |
| 6 | ರೇಷ್ಮೆ ನಿರೀಕ್ಷಕರು | 49 |
| 7 | ರೇಷ್ಮೆ ಪ್ರದರ್ಶಕರು | 41 |
| 8 | ರೇಷ್ಮೆ ಪ್ರವರ್ತಕರು | 06 |
| 9 | ಪತ್ರಾಂಕಿತ ವ್ಯವಸ್ಥಾಪಕರು–1 | 01 |
| 10 | ಪತ್ರಾಂಕಿತ ವ್ಯವಸ್ಥಾಪಕರು–2 | 02 |
| 11 | ಅಧೀಕ್ಷಕರು | 08 |
| 12 | ಶೀಘ್ರಲಿಪಿಗಾರರು | 01 |
| 13 | ಪ್ರಥಮ ದರ್ಜೆ ಸಹಾಯಕರು | 22 |
| 14 | ದ್ವಿತೀಯ ದರ್ಜೆ ಸಹಾಯಕರು | 04 |
| 15 | ಬೆರಳಚ್ಚುಗಾರರು | 01 |
| 16 | ವಾಹನ ಚಾಲಕರು | 08 |
| 17 | ಅನುಚರರು | 04 |
| 18 | ತೂಕ ಮಾಡುವವರು | 03 |
| 19 | ಗ್ರೂಪ್ ಡಿ | 09 |
| | **ಒಟ್ಟು** | **173** |

ಪಿ.ಆರ್. 1270

**ವಿ. ಹರಿಹರನ್**

ಪೀಠಾಧಿಕಾರಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ (ರೇಷ್ಮೆ)

**ಕಾನೂನು ಸಚಿವಾಲಯ**

**ವಿಷಯ:** ಮೂಡುಬಿದರೆಯಲ್ಲಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯವನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಜಿಒಬಿ-II 154/2001, ದಿನಾಂಕ: 23.6.2004.

**ಪ್ರಸ್ತಾವನೆ:-**

ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಮೇಲೆ ಓದಲಾದ ದಿನಾಂಕ: 23.6.2004 ರ ಪತ್ರದಲ್ಲಿ ದಿನಾಂಕ: 31.12.2003 ರ ಅಂತ್ಯಕ್ಕೆ ಮೂಡಬಿದರೆಯಲ್ಲಿ 1608 ಪ್ರಕರಣಗಳು ಬಾಕಿ ಇದ್ದು ಫಿರ್ಯಾದಿದಾರರ ಅನುಕೂಲವನ್ನು ಗಮನದಲ್ಲಿಟ್ಟುಕೊಂಡು ಒಂದು ಸಿವಿಲ್ ಜಡ್ಜ್ ಕಿರಿಯ ವಿಭಾಗ ಮತ್ತು ಜೆಎಂಎಫ್‌ಸಿ ನ್ಯಾಯಾಲಯವನ್ನು ಸೃಜಿಸಲು ಕೋರಿದ್ದು, ಸದರಿ ನ್ಯಾಯಾಲಯಕ್ಕೆ ಆವರ್ತ ಮತ್ತು ಅನಾವರ್ತ ವೆಚ್ಚ ರೂ. 32,25,544 ಗಳಾಗುತ್ತದೆಯೆಂದು ತಿಳಿಸಿ, ಸದರಿ ನ್ಯಾಯಾಲಯವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

| | | |
|---|---|---|
| 1 | ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆಎಂಎಫ್‌ಸಿ | 1 |
| 2 | ಶಿರಸ್ತೇದಾರರು | 2 |
| 3 | ಪ್ರ.ದ.ಸ. | 3 |
| 4 | ಶೀಘ್ರಲಿಪಿಗಾರರು | 1 |
| 5 | ದ್ವಿ.ದ.ಸ. | 5 |
| 6 | ಬೆರಳಚ್ಚುಗಾರರು | 2 |
| 7 | ಬೆರಳಚ್ಚು-ನಕಲುಗಾರ | 1 |
| 8 | ಬೇಲಿಫ್ಸ್ | 2 |
| 9 | ಪ್ರೋಸಸ್ ಸರ್ವರ್ | 5 |
| 10 | ಅಟೆಂಡರ್ | 1 |
| 11 | ಪ್ಯೂನ್ | 4 |
| | ಒಟ್ಟು | 27 ಹುದ್ದೆಗಳು |

ನ್ಯಾಯಾಲಯದ ಸೃಜನೆಗೆ ತಗಲುವ ವೆಚ್ಚವು ಈ ಕೆಳಕಂಡಂತಿದೆ:-

| | | |
|---|---|---|
| 1 | **ಆವರ್ತ ವೆಚ್ಚ:**<br>ಸಿಬ್ಬಂದಿ ವೆಚ್ಚ<br>ಕಛೇರಿ ವೆಚ್ಚ | <br>ರೂ. 17,75,544<br>ರೂ. 6,00,000 |
| 2 | **ಅನಾವರ್ತ ವೆಚ್ಚ:**<br>ಪೀಠೋಪಕರಣ, ಬೆರಳಚ್ಚು ಯಂತ್ರಗಳು, ದೂರವಾಣಿ ಮತ್ತಿತರೆ | <br>ರೂ. 6,00,000 |
| 3 | ಗಣಕಯಂತ್ರ ಅಳವಡಿಕೆ ಮತ್ತಿತರೆ | ರೂ. 2,50,000 |
| | ಒಟ್ಟು | ರೂ. 32,25,544 |

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 58 ಎಲ್‌ಸಿಇ 2004, ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಮೂಡಬಿದರೆಯಲ್ಲಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯವನ್ನು ಈ ಕೆಳಕಂಡ ಸಿಬ್ಬಂದಿಯೊಂದಿಗೆ ಆರ್ಥಿಕ ವರ್ಷ 2004-05 ರಲ್ಲಿ ಸೃಜಿಸಲು ಸರ್ಕಾರವು ಮಂಜೂರಾತಿ ನೀಡಿದೆ.

| | | |
|---|---|---|
| 1 | ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆಎಂಎಫ್‌ಸಿ | 1 |
| 2 | ಶಿರಸ್ತೇದಾರರು | 2 |
| 3 | ಪ್ರ.ದ.ಸ. | 3 |
| 4 | ಶೀಘ್ರಲಿಪಿಗಾರರು | 1 |
| 5 | ದ್ವಿ.ದ.ಸ. | 5 |
| 6 | ಬೆರಳಚ್ಚುಗಾರರು | 2 |
| 7 | ಬೆರಳಚ್ಚು-ನಕಲುಗಾರ | 1 |
| 8 | ಬೇಲಿಫ್ಸ್ | 2 |
| 9 | ಪ್ರೋಸಸ್ ಸರ್ವರ್ | 5 |
| 10 | ಅಟೆಂಡರ್ | 1 |
| 11 | ಪ್ಯೂನ್ | 4 |
| | ಒಟ್ಟು | 27 ಹುದ್ದೆಗಳು |

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ “2014-00-105-0-01-ಸಿಬ್ಬಂದಿ ವೆಚ್ಚ-125-ಆಧುನೀಕರಣ-ಯೋಜನೇತರ” ರಡಿಯಲ್ಲಿ 2004-05ನೇ ಸಾಲಿನಲ್ಲಿ ಒದಗಿಸುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳು ಮತ್ತು ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: 4850/2004 ದಿನಾಂಕ: 8.10.2004 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1280

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ:** ರಾಜ್ಯದಲ್ಲಿ ಸಣ್ಣ ವಿಮಾನ ನಿಲ್ದಾಣಗಳನ್ನು ಸ್ಥಾಪಿಸಲು / ಅಭಿವೃದ್ಧಿಪಡಿಸಲು ಕೆ.ಎಸ್.ಐ.ಐ.ಡಿ.ಸಿ.ಯನ್ನು ನೋಡಲ್ ಏಜೆನ್ಸಿಯೆಂದು ನೇಮಿಸುವ ಬಗ್ಗೆ.

**ಓದಲಾಗಿದೆ:** ರಾಜ್ಯದಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ ಬಗ್ಗೆ ಮಾನ್ಯ ಉಪ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 26-8-04 ರಂದು ನಡೆದ ಸಭೆಯಲ್ಲಿ ತೆಗೆದುಕೊಂಡ ನಿರ್ಧಾರಗಳು.

**ಪ್ರಸ್ತಾವನೆ:**

ಮಾನ್ಯ ಉಪ ಮುಖ್ಯ ಮಂತ್ರಿಗಳ 2004-05ನೇ ಸಾಲಿನ ಆಯವ್ಯಯದ ಭಾಷಣದ ಕಂಡಿಕೆ 81 ರಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ ವಿಷಯವಾಗಿ ಈ ಕೆಳಕಂಡಂತೆ ಘೋಷಣೆ ಮಾಡಲಾಗಿದೆ.

"ಆರ್ಥಿಕ ಚಟುವಟಿಕೆಗಳಿಗೆ ಅವಕಾಶವಿರುವ ಕಡೆ ಉತ್ತೇಜನ ನೀಡುವ ಸಲುವಾಗಿ ನಾನು ಮೈಸೂರು ಮತ್ತು ಗುಲ್ಬರ್ಗಾಗಳಲ್ಲಿ ವಿಮಾನ ನಿಲ್ದಾಣಗಳನ್ನು ಸ್ಥಾಪಿಸಲು ಉದ್ದೇಶಿಸಿದ್ದು, ಇ ದಕ್ಕಾಗಿ ಪ್ರಸಕ್ತ ವರ್ಷ 5 ಕೋಟಿ ರೂಗಳನ್ನು ಒದಗಿಸುತ್ತಿದ್ದೇನೆ"

ರಾಜ್ಯದಲ್ಲಿನ ಮೈಸೂರು ವಿಮಾನ ನಿಲ್ದಾಣವನ್ನು ಕಾರ್ಯಚರಣೆ ಮಾಡಲು ಮತ್ತು ಗುಲ್ಬರ್ಗಾದಲ್ಲಿ ವಿಮಾನ ನಿಲ್ದಾಣವನ್ನು ಸ್ಥಾಪಿಸುವ ಬಗ್ಗೆ ಮಾನ್ಯ ಉಪ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 26-8-2004 ರಂದು ಕೆ.ಎಸ್.ಐ.ಐ.ಡಿ.ಸಿ.ಯ ಸಭಾಂಗಣದಲ್ಲಿ ಸಭೆ ನಡೆಯಿತು. ಸದರಿ ಸಭೆಯಲ್ಲಿ ಈ ಕೆಳಕಂಡಂತೆ ನಿರ್ಣಯಿಸಲಾಯಿತು.

1) ರಾಜ್ಯದಲ್ಲಿ ವೈಮಾನಿಕ ಮೂಲ ಸೌಲಭ್ಯವನ್ನು ಅಭಿವೃದ್ಧಿಗೊಳಿಸಲು ಮತ್ತು ಅದರಲ್ಲೂ ಗುಲ್ಬರ್ಗಾ ವಿಮಾನ ನಿಲ್ದಾಣವನ್ನು ಅಭಿವೃದ್ಧಿಗೊಳಿಸಲು ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮವನ್ನು (ಕೆ.ಎಸ್.ಐ.ಐ.ಡಿ.ಸಿ) ನೋಡಲ್ ಏಜೆನ್ಸಿಯೆಂದು ಗೊತ್ತುಪಡಿಸುವುದು

2) ತತ್ಪರಿಣಾಮವಾಗಿ ಕೆ.ಎಸ್.ಐ.ಐ.ಡಿ.ಸಿ.ಯು ಹಿಂಬಾಲಿಕ ಕ್ರಮವಾಗಿ, ತಾಂತ್ರಿಕ ಸಲಹೆಗಾರರನ್ನು ನೇಮಕ ಮಾಡಿ ಕೊಳ್ಳುವುದು ಮತ್ತು ಸಮಗ್ರ ಯೋಜನೆ ತಯಾರಿಕೆ, ವಿವರವಾದ ವಿನ್ಯಾಸ, ರಚನೆ ಕೆಲಸ ಪ್ರಾರಂಭಿಸುವುದು (Start Work on the Master Plan, detailed designs and drawings etc.,);

3) 2005ರ ಜನವರಿ ಹೊತ್ತಿಗೆ ಗುಲ್ಬರ್ಗಾ ವಿಮಾನ ನಿಲ್ದಾಣದ ನಿವೇಶನದ ಮೇಲೆ ಕೆಲಸ ಪ್ರಾರಂಭಿಸುವುದಕ್ಕೆ ಏರ್ಪಾಟು ಮಾಡುವುದು ಮತ್ತು 2005ರ ಡಿಸೆಂಬರ್ ವೇಳೆಗೆ ವಿಮಾನ ನಿಲ್ದಾಣವನ್ನು ಸಿದ್ದಗೊಳಿಸುವುದು;

4) ಇ ದರೊಂದಿಗೆ, ವಿಮಾನ ನಿಲ್ದಾಣದ ವ್ಯವಸ್ಥೆ ಮತ್ತು ಕಾರ್ಯನಿರ್ವಹಣೆಯನ್ನು ಸಮರ್ಪಕವಾಗಿ ನೋಡಿ ಕೊಳ್ಳುವಂತಹ ಆಪರೇಟರ್‌ಗಳಿಂದ ಕೆ.ಎಸ್.ಐ.ಐ.ಡಿ.ಸಿ.ಯು ಬಿಡ್‌ಗಳನ್ನು ಆಹ್ವಾನಿಸುವುದು ಮತ್ತು ಸೂಕ್ತವಾದ ಒಪ್ಪಂದದ ಮೂಲಕ ಸೇವೆಗಳನ್ನು ಒದಗಿಸುವುದು.

ಮೇಲೆ ಹೇಳಿದ ಸನ್ನಿವೇಶದಲ್ಲಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 24 ರಾಅವಿ 2000,ಬೆಂಗಳೂರು,ದಿನಾಂಕ: 2ನೇ ನವೆಂಬರ್ 2004**

1) ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸನ್ನಿವೇಶದಲ್ಲಿ ಗುಲ್ಬರ್ಗಾ ವಿಮಾನ ನಿಲ್ದಾಣ ಅಭಿವೃದ್ಧಿ ಕಾರ್ಯಕ್ಕೆ ಸೀಮಿತಗೊಳಿಸುವ ನಿಬಂಧನೆಗೊಳಪಟ್ಟು ಕರ್ನಾಟಕ ರಾಜ್ಯ ಕೈಗಾರಿಕಾ ಅಭಿವೃದ್ಧಿ ಬಂಡವಾಳ ಮತ್ತು ಹೂಡಿಕೆ ನಿಗಮವನ್ನು ನೋಡಲ್ ಏಜೆನ್ಸಿಯೆಂದು ನೇಮಿಸಲಾಗಿದೆ.

2) ತತ್ಪರಿಣಾಮವಾಗಿ ಕೆ.ಎಸ್.ಐ.ಐ.ಡಿ.ಸಿ.ಯು ಹಿಂಬಾಲಿಕ ಕ್ರಮವಾಗಿ, ತಾಂತ್ರಿಕ **ಸಲಹೆಗಾರರನ್ನು ನೇಮಕ ಮಾಡಿಕೊಳ್ಳುವುದು ಮತ್ತು ಸಮಗ್ರ ಯೋಜನೆ ತಯಾರಿಕೆ, ವಿವರವಾದ ವಿನ್ಯಾಸ,** ರಚನೆ **ಕೆಲಸ ಪ್ರಾರಂಭಿಸುವುದು (Start Work on the Master Plan, detailed designs and drawings etc.,);**

3) 2005ರ ಜನವರಿ ಹೊತ್ತಿಗೆ ಗುಲ್ಬರ್ಗಾ ವಿಮಾನ ನಿಲ್ದಾಣದ ನಿವೇಶನದ ಮೇಲೆ ಕೆಲಸ ಪ್ರಾರಂಭಿಸುವುದಕ್ಕೆ ಏರ್ಪಾಟು ಮಾಡುವುದು ಮತ್ತು 2005ರ ಡಿಸೆಂಬರ್ ವೇಳೆಗೆ ವಿಮಾನ ನಿಲ್ದಾಣವನ್ನು ಸಿದ್ದಗೊಳಿಸುವುದು.

4) ಇ ದರೊಂದಿಗೆ, ವಿಮಾನ ನಿಲ್ದಾಣದ ನಿರ್ವಹಣೆ ವ್ಯವಸ್ಥೆ ಮತ್ತು ಕಾರ್ಯ ನಿರ್ವಹಣೆಯನ್ನು ಸಮರ್ಪಕವಾಗಿ ನೋಡಿಕೊಳ್ಳುವಂತಹ ಮತ್ತು ರಿಯಾಯಿತಿ ಒಪ್ಪಂದದನ್ವಯ (Concession Structure) ಸಕಾಲಿಕವಾಗಿ ಸೇವೆಯನ್ನು ಒದಗಿ ಸುವಂತಹ ಆಪರೇಟರ್‌ಗಳಿಂದ ಕೆ.ಎಸ್.ಐ.ಐ.ಡಿ.ಸಿ.ಯು ಬಿಡ್‌ಗಳನ್ನು ಆಹ್ವಾನಿಸುವುದು.

ಸದರಿ ಸಂಸ್ಥೆಯು ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಯೋಜನಾ ಕೋಶವು (ಬಿಐಎಪಿ ಸೆಲ್) ಈ ಮೇಲಿನ ಉದ್ದೇಶಕ್ಕೆ ಕಾರ್ಯನಿರ್ವಹಿಸತಕ್ಕದು ಮತ್ತು ಅದೇ ಉದ್ದೇಶಕ್ಕಾಗಿ ಕೆ.ಎಸ್.ಐ.ಐ.ಡಿ.ಸಿ.ಯು ಅಗತ್ಯ ಬಿದ್ದಲ್ಲಿ ಭಾರತೀಯ ವೈಮಾನಿಕ ಪ್ರಾಧಿಕಾರದ ಸಲಹಾ ಸೇವೆಯನ್ನು ಬಳಸಿಕೊಳ್ಳಬಹುದು.

ಈ ಆದೇಶವನ್ನು ಆರ್ಥಿಕ ಇ ಲಾಖೆಯ ಸಹಮತಿಯನ್ನು ಅ.ಟಿ.ಸಂಖ್ಯೆ:1759/ವೆಚ್ಚ-1/04, ದಿನಾಂಕ 11-10-2004 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಬಿ.ರೇಣುಕಾಪ್ರಸಾದ್**

ಪಿ.ಆರ್. 1234

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇ ಲಾಖೆ.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ:** **ಶ್ರೀ ಎಸ್.ಜಿ. ಕಾಮಿರೆಡ್ಡಿ, ಹಿಂದಿನ ಕೃಷಿ ಅಧಿಕಾರಿ, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಧಾರವಾಡ ಇವರ ವಿರುದ್ಧ ಧಾರವಾಡ ಲೋಕಾಯುಕ್ತ ಪೊಲೀಸರು, ಲಂಚ ನಿರೋಧ ಕಾಯ್ದೆ 1988ರ ಕಾಲಂ 13(1)(ಇ) ರಡಿಯಲ್ಲಿ ದಾಖಲು ಮಾಡಿರುವ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 4:91ಕ್ಕೆ ಕ್ರಮ ಜರುಗಿಸಿ ಕರ್ನಾಟಕ ಲೋಕಾಯುಕ್ತ (ಉಪ) ರವರ ವರದಿಯಂತೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಿ ಆರ್ಥಿಕ ಸೌಲಭ್ಯಗಳನ್ನು ಬಿಡುಗಡೆಗೊಳಿಸುವ ಬಗ್ಗೆ.**

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 66 ಕೃಪರಿ 91, ದಿನಾಂಕ: 21.1.92.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಕೃತೋಇ 66 ಕೃಪವಿ 91 ದಿನಾಂಕ: 29.3.97.
3) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 66 ಕೃಪವಿ 91 ದಿನಾಂಕ: 29.3.97.
4) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 2909/97.
5) ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 21661/97, ದಿನಾಂಕ: 1.1.2002.
6) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 66 ಕೃಪವಿ 91, ದಿನಾಂಕ: 1.9.99.
7) ಪ್ರಿನ್ಸಿಪಲ್ ಸೆಷನ್ಸ್ ಅಂಡ್ ಸ್ಪೆಷಲ್ ಜಡ್ಜ್ ಧಾರವಾಡ ಇವರು SPL SVC CC No. 1:95 ರಲ್ಲಿ ದಿನಾಂಕ: 11.12.2003 ರಂದು ನೀಡಿರುವ ತೀರ್ಪು.
8) ಕೃಷಿ ಆಯುಕ್ತರ ಪತ್ರ ಸಂಖ್ಯೆ: ಇಎಸ್‌ಟಿ-1/ಐಎನ್‌ಕ್ಯೂ 1/19/91-92, ದಿ: 8.3.04.

**ಪ್ರಸ್ತಾವನೆ:-**

ಶ್ರೀ ಎಸ್.ಜಿ. ಕಾಮಿರೆಡ್ಡಿ, ಹಿಂದಿನ ಕೃಷಿ ಅಧಿಕಾರಿ, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಧಾರವಾಡ ಇವರು ಅವರ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿರುವ ಬಗ್ಗೆ ಲೋಕಾಯುಕ್ತ, ಧಾರವಾಡ ರವರು ದಿನಾಂಕ: 9.8.91 ರಂದು ದಾಳಿ ನಡೆಸಿ, ದಿನಾಂಕ: 9.8.91 ರಂದು ಸರ್ಕಾರಕ್ಕೆ ವರದಿ ಸಲ್ಲಿಸಿ, ಸದರಿ ಅಧಿಕಾರಿಯನ್ನು ಅಮಾನತ್ತಿನಲ್ಲಿರಿಸಲು ಕೋರಿದ್ದರ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಶ್ರೀ ಎಸ್.ಜಿ. ಕಾಮಿರೆಡ್ಡಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅವರ ವಿರುದ್ಧ ವಿಚಾರಣೆಯನ್ನು ಬಾಕಿಯಿಟ್ಟು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಕೃಷಿ ಅಧಿಕಾರಿ, ಚಿಕ್ಕೋಡಿ ಇಲ್ಲಿಗೆ ನೇಮಕ ಮಾಡಲಾಗಿದೆ. ತದನಂತರ, ಶ್ರೀ ಎಸ್.ಜಿ. ಕಾಮಿರೆಡ್ಡಿ, ಕೃಷಿ ಅಧಿಕಾರಿ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಾವಳಿ 1957ರ ನಿಯಮ 12(1)(ಎ) ರಡಿಯಲ್ಲಿ ಕಾರಣ ಕೇಳುವ ನೋಟೀಸ್ ಜಾರಿಮಾಡಿ, ಸದರಿ ಅಧಿಕಾರಿಯಿಂದ ಹೇಳಿಕೆ ಪಡೆದು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಸದರಿ ಅಧಿಕಾರಿಗೆ ಸಿಸಿಎ ನಿಯಮ 8(VI-ಎ) ರನ್ವಯ ಅವರ ಮೂಲ ವೇತನವನ್ನು ಆಗ ಪಡೆಯುತ್ತಿದ್ದ ವೇತನ ಶ್ರೇಣಿಯಲ್ಲಿ ಮೂರು ಹಂತ ಕೆಳಗಿಳಿಸಿದ್ದು, ಈ ಆದೇಶವು ಮೂರು ವರ್ಷಗಳ ಕಾಲ ಜಾರಿಯಲ್ಲಿರುತ್ತದೆಂದು ಹಾಗೂ ಸದರಿ ಅವಧಿಯಲ್ಲಿ ಇವರು ವಾರ್ಷಿಕ ಬಡ್ತಿಗೆ ಅರ್ಹರಿರುವುದಿಲ್ಲವೆಂದು ಹಾಗೂ ಈ ಅವಧಿ ಮುಗಿದ ನಂತರ ವಾರ್ಷಿಕ ವೇತನವನ್ನು ನಿಗದಿಪಡಿಸುವಾಗ ಇಳಿಸಿದ ಹಂತದಿಂದ ಮಾತ್ರವೇ ಮುಂದಿನ ವಾರ್ಷಿಕ ವೇತನ ಪಡೆಯಲು ಅರ್ಹರಿರುತ್ತಾರೆಂದು ಆದೇಶಿಸಿದೆ.

ಈ ದಂಡನೆಯ ವಿರುದ್ಧ ಶ್ರೀ ಕಾಮಿರೆಡ್ಡಿಯವರು ಕೆಎಟಿಯಲ್ಲಿ ಅರ್ಜಿ ಸಲ್ಲಿಸಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ತೀರ್ಪಿನಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಸರ್ಕಾರ ವಿಧಿಸಿರುವ ದಂಡನೆಯನ್ನು ಎತ್ತಿ ಹಿಡಿದಿದೆ. ಪುನಃ ಶ್ರೀ ಕಾಮಿರೆಡ್ಡಿಯವರು ರಿಟ್ ಅರ್ಜಿ ಸಂಖ್ಯೆ: 21661/97 ನ್ನು ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದು, ನ್ಯಾಯಾಲಯವು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಕೆಎಟಿ ದಿನಾಂಕ: 25.6.97 ರಲ್ಲಿ ನೀಡಿರುವ ತೀರ್ಪು ಹಾಗೂ ದಿನಾಂಕ: 29.3.97ರ ಆದೇಶದಲ್ಲಿ ಸರ್ಕಾರ ವಿಧಿಸಿದ ದಂಡನೆಯ ಇಲಾಖಾ ವಿಚಾರಣೆಯನ್ನು ನಿಯಮಾನುಸಾರ ಮಾಡದೆ ವಿಧಿಸಲಾಗಿದ್ದು, ದಂಡನಾ ಆದೇಶವನ್ನು ರದ್ದುಗೊಳಿಸಿ ಪುನಃ ವಿಚಾರಣೆ ಕೈಗೊಳ್ಳಲು ತಿಳಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಶ್ರೀ ಎಸ್.ಜಿ. ಕಾಮಿರೆಡ್ಡಿ ರವರ ವಿರುದ್ಧ ಲಂಚ ನಿರೋಧ ಕಾಯ್ದೆಯಡಿ ನ್ಯಾಯಾಲಯದಲ್ಲಿ ಫಿರ್ಯಾದು ದಾಖಲು ಮಾಡಲು ಅನುಮತಿ ನೀಡಿದ್ದು, ಶ್ರೀ ಕಾಮಿರೆಡ್ಡಿಯವರು ದಿನಾಂಕ; 19.10.2003 ರಂದು ಮರಣ ಹೊಂದಿರುವುದರಿಂದ, ಧಾರವಾಡ ಪ್ರಿನ್ಸಿಪಲ್ ಸೆಷನ್ಸ್ ಜಡ್ಜ್ ನ್ಯಾಯಾಲಯವು ಮೇಲೆ ಓದಲಾದ ಕ್ರಮ ಸಂಖ್ಯೆ (7) ರಲ್ಲಿನ ತೀರ್ಪಿನಲ್ಲಿ ಪ್ರಕರಣ ಸಂಖ್ಯೆ 4/91ನ್ನು ಕೈಬಿಟ್ಟು ಅಬೇಟ್ ಎಂದು ತೀರ್ಮಾನಿಸಿ ನ್ಯಾಯಾಲಯ ತೀರ್ಪು ನೀಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಕೃಷಿ ಆಯುಕ್ತರ ಪತ್ರದಲ್ಲಿ ಶ್ರೀ ಎಸ್.ಜಿ. ಕಾಮಿರೆಡ್ಡಿ ರವರು ದಿನಾಂಕ: 19.10.2003 ರಂದು ನಿಧನರಾಗಿದ್ದು, ದಿನಾಂಕ: 11.12.2002 ರ ಧಾರವಾಡ ಲೋಕಾಯುಕ್ತ ಮೊಕದ್ದಮೆ ಸಂಖ್ಯೆ: ಎಸ್‌ಪಿಎಲ್.ಎಸ್‌ವಿಸಿ.ಸಿಸಿ.ನಂ. 1:95 ರಲ್ಲಿ ಮೊಕದ್ದಮೆಯನ್ನು ಅಂತ್ಯಗೊಳಿಸಲಾಗಿದೆ ಎಂದು ತಿಳಿಸಿದ್ದು, ಇವರ ಪತ್ನಿ ಶ್ರೀಮತಿ ಸುಶೀಲ ಎಸ್. ಕಾಮಿರೆಡ್ಡಿ ಕೋಂ ಎಸ್.ಜಿ. ಕಾಮಿರೆಡ್ಡಿ ಇವರು ಇಲಾಖೆಗೆ ಮನವಿ ಸಲ್ಲಿಸಿ ನ್ಯಾಯಾಲಯಗಳ ಆದೇಶಗಳ ಹಿನ್ನಲೆಯಲ್ಲಿ ಅವರಿಗೆ ಬರಬೇಕಾಗಿರುವ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ಹಾಗೂ ಎಲ್ಲಾ ಆರ್ಥಿಕ ಸೌಲಭ್ಯಗಳನ್ನು ಮಂಜೂರು ಮಾಡಲು ವಿನಂತಿಸಿದ್ದು, ಇವರ ಮನವಿಯನ್ನು ಪರಿಗಣಿಸಿ ಅವರಿಗೆ ಅರ್ಹತೆ ಇರುವ ಎಲ್ಲಾ ನಿವೃತ್ತಿ ಹಾಗೂ ಇತರೆ ಆರ್ಥಿಕ ಸೌಲಭ್ಯಗಳನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಶ್ರೀ ಎಸ್.ಜಿ. ಕಾಮಿರೆಡ್ಡಿಯವರು ಮರಣ ಹೊಂದಿರುವುದರಿಂದ ಉಚ್ಚ ನ್ಯಾಯಾಲಯ ದಿನಾಂಕ: 1.1.2002 ರ ತೀರ್ಪಿನ ನಂತರ ವಿಚಾರಣೆ ನಡೆಸಿ ದಂಡನೆ ವಿಧಿಸಲು ಸಾಧ್ಯವಿಲ್ಲದಿರುವುದರಿಂದ ಹಾಗೂ ಈಗಾಗಲೇ ಉಚ್ಚ ನ್ಯಾಯಾಲಯವು ಅರ್ಜಿ ಸಂಖ್ಯೆ: 21661/97 ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕೃತೋಇ 66 ಕೃಪವಿ 91 ದಿನಾಂಕ; 29.3.97 ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ರದ್ದುಗೊಳಿಸಿರುವುದರಿಂದ ಹಾಗೂ ವಿಶೇಷ ನ್ಯಾಯಾಲಯ, ಧಾರವಾಡವು ವಿಚಾರಣೆಯಿಂದ ಕೈಬಿಟ್ಟು ಅಬೇಟ್ ಎಂದು ತೀರ್ಮಾನಿಸಿರುವುದರಿಂದ ಇವುಗಳನ್ನೆಲ್ಲಾ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 71 ಕೃಪರಿ 1997, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರವು ದಿವಂಗತ ಶ್ರೀ ಎಸ್.ಜಿ. ಕಾಮಿರೆಡ್ಡಿ, ಕೃಷಿ ಅಧಿಕಾರಿ ಇವರು ಅಮಾನತ್ತಿನಲ್ಲಿದ್ದ ದಿನಾಂಕ: 22.1.92 ರಿಂದ ದಿನಾಂಕ: 7.2.92 ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ, ಸದರಿ ಅಧಿಕಾರಿಗೆ ಬರಬೇಕಾದ ಎಲ್ಲಾ ನಿವೃತ್ತಿ ಹಾಗೂ ಸೇವಾ ಸೌಲಭ್ಯಗಳನ್ನು ಅವರ ಅರ್ಹ ವಾರಸುದಾರರಿಗೆ ತಕ್ಷಣವೇ ಬಿಡುಗಡೆ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1201

**ಎಂ.ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**CORRIGENDUM**

**No. DPAR 447 SAS 2004, Bangalore, Dated 8th November 2004**

In the Government order No. DPAR 624 SAS 2002, dated 6.3.2003 the existing Head of Account "2070-00-003-4-01 (Non-plan)" occuring in para 3 shall be substituted by the Head of Account "2052-00-090-0-050-office Expenses".

By Order and in the Name of the Governor of Karnataka,

**K. Sudhakara Shetty**

PR-1252

Under Secretary to Government,

Department of Personnel and Administrative Reforms (Services-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 607 ಎಸ್‌ಎಎಸ್ 2004, ದಿನಾಂಕ: 26.10.2004.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಕೃಷ್ಣಲಾಲ್ ನೇಗಿ, ಐ.ಎ.ಎಸ್. ಇವರನ್ನು ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯಲ್ಲಿ ನಿಮ್ನೀಕರಿಸಲಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ. ಆದ್ದರಿಂದ ಪ್ರಸ್ತುತ ಅಸ್ಥಿತ್ವದಲ್ಲಿರುವ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮರುಪದನಾಮೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಸಸಿವಿ 2004, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಸದರಿ ಹುದ್ದೆಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಆಶಿಸೇ 2003, ದಿನಾಂಕ: 14.7.2003 ರಲ್ಲಿ ನಿಗದಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 18.2.2003 ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 46 ವೆಚ್ಚ-5:2003 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1253

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

**ವಿಷಯ:** ಬೆಂಗಳೂರು-1 ಯೋಜನೆ ಕಾರ್ಯನಿರ್ವಹಿಸಲು ಬೆಂಗಳೂರು-1 ನಿರ್ದೇಶನಾಲಯದ ವಿವಿಧ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ:-**

ಬೆಂಗಳೂರು ನಗರದ ವಿವಿಧ ಭಾಗಗಳಲ್ಲಿ ಸಾರ್ವಜನಿಕರು ವಿದ್ಯುತ್, ನೀರು, ಸಾರಿಗೆ, ಮಹಾನಗರ ಪಾಲಿಕೆಯ ತೆರಿಗೆ, ದೂರವಾಣಿ ಮುಂತಾದ ಜನೋಪಯೋಗಿ ಸೇವೆಗಳ ಶುಲ್ಕಗಳನ್ನು ಪಾವತಿಸುವುದಕ್ಕಾಗಿ ವಿವಿಧ ಸರ್ಕಾರಿ ಕಛೇರಿಗಳಿಗೆ ಅಲೆಯುವ ಬದಲಾಗಿ ಒಂದೇ ಕೇಂದ್ರದಲ್ಲಿ ಪಾವತಿಸಲು ಅನುಕೂಲವಾಗುವಂತಹ ಮತ್ತು ವಿವಿಧ ಸೇವೆಗಳ ದೃಢೀಕರಣ ಪತ್ರ ಮುಂತಾದ ಸೇವೆಗಳನ್ನು ಲಭ್ಯಗೊಳಿಸುವುದಕ್ಕಾಗಿ ಸರ್ಕಾರವು ಬೆಂಗಳೂರು-1 ಯೋಜನೆಯನ್ನು ಹಮ್ಮಿಕೊಂಡಿದೆ. ಈ ಯೋಜನೆಯನ್ನು ಕಾರ್ಯಗತಗೊಳಿಸಲು ಬೆಂಗಳೂರು-1 ನಿರ್ದೇಶನಾಲಯವನ್ನು ಸೃಜಿಸಲು ಸರ್ಕಾರವು ಪ್ರಸ್ತಾಪಿಸಿದ್ದು, ಸದರಿ ನಿರ್ದೇಶನಾಲಯದಲ್ಲಿ ಕಾರ್ಯನಿರ್ವಹಿಸಲು ನಿರ್ದೇಶಕರು, ಉಪನಿರ್ದೇಶಕರು, ಸಹಾಯಕ ನಿರ್ದೇಶಕರು ಮತ್ತು ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಸೃಜಿಸಬೇಕಾಗಿರುತ್ತದೆ. ಈ ಹುದ್ದೆಗಳನ್ನು ಕ್ರಮವಾಗಿ ಹಿರಿಯ ಕೆ.ಎ.ಎಸ್. ಅಧಿಕಾರಿಗಳ ವೃಂದದಿಂದ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಿಂದ, ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ ತುಂಬಲು ಪ್ರಸ್ತಾಪಿಸಲಾಗಿದ್ದು, ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 31 ವಿಮಾಆ 2003, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆಡಳಿತ ಸುಧಾರಣಾ ವಿಭಾಗದ ಇ-ಆಡಳಿತ ಸಚಿವಾಲಯವು ಹಮ್ಮಿಕೊಂಡಿರುವ ಬೆಂಗಳೂರು-1 ಯೋಜನೆಯನ್ನು ನಿರ್ವಹಿಸುವುದಕ್ಕಾಗಿ ಬೆಂಗಳೂರು-1 ನಿರ್ದೇಶನಾಲಯವನ್ನು ಈ ಮೂಲಕ ಸೃಜಿಸಲಾಗಿದೆ. ಸದರಿ ನಿರ್ದೇಶನಾಲಯಕ್ಕೆ ಈ ಕೆಳಕಾಣಿಸಿದಂತೆ ಆಯಾ ಹುದ್ದೆಗಳ ವೇತನ ಶ್ರೇಣಿ ಮುಂತಾದ ವಿವರಗಳೊಂದಿಗೆ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳು | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ನಿರ್ದೇಶಕರು | 1 | ರೂ. 10620-14960 ಅಥವಾ ಮೇಲ್ಪಟ್ಟು |
| 2 | ಉಪ ನಿರ್ದೇಶಕರು | 3 | ರೂ. 9580-14200 |
| 3 | ಸಹಾಯಕ ನಿರ್ದೇಶಕರು | 2 | ರೂ. 6300-11840 |
| 4 | ಲೆಕ್ಕಾಧಿಕಾರಿಗಳು | 2 | ರೂ. 7400-13720 |

2. ಮೇಲ್ಕಂಡ ವೇತನ ಶ್ರೇಣಿಯಲ್ಲಿ ನಿರ್ದೇಶಕರ ಹುದ್ದೆಯನ್ನು ಹಿರಿಯ ಕೆ.ಎ.ಎಸ್. ವೃಂದದಿಂದ ತುಂಬತಕ್ಕದ್ದು.

3. ಉಪ ನಿರ್ದೇಶಕರ ಹುದ್ದೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಿಂದ ನಿಯೋಜನೆ ಮೇರೆಗೆ ತುಂಬತಕ್ಕದ್ದು.

4. ಲೆಕ್ಕಾಧಿಕಾರಿಗಳ ಮತ್ತು ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಕ್ರಮವಾಗಿ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ಮತ್ತು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಿಂದ ನಿಯೋಜನೆ ಮೇರೆಗೆ ತುಂಬತಕ್ಕದ್ದು, ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಪರ್ಯಾಯವಾಗಿ ಪ್ರಸಕ್ತ ನಿಯಮಾವಳಿ ಮೇರೆಗೆ ಮುಕ್ತ ಮಾರುಕಟ್ಟೆಯಿಂದ ಗುತ್ತಿಗೆ ಆಧಾರದ ಮೇಲೆ ಈ ಹುದ್ದೆಗಳನ್ನು ತುಂಬಬಹುದಾಗಿದೆ.

5. ಬೆಂಗಳೂರು-1 ನಿರ್ದೇಶನಾಲಯದ ಜವಾಬ್ದಾರಿಗಳು ಸಂಕ್ಷಿಪ್ತವಾಗಿ ಈ ಕೆಳಗಿನಂತಿರುತ್ತವೆ:

(ಅ) ಬೆಂಗಳೂರು-1 ಕೇಂದ್ರಗಳ ನಿರ್ಮಾಣಕ್ಕಾಗಿ ನಿವೇಶನಗಳನ್ನು ತಯಾರಿಸುವುದು;

(ಆ) ಹಿನ್ನೆಲೆ ಇಲಾಖೆಗಳ ಪ್ರಗತಿ ಅಂತರವನ್ನು ವಿಶ್ಲೇಷಿಸುವುದು;

(ಇ) ಸಂಬಂಧಪಟ್ಟ ಇಲಾಖೆಗಳೊಂದಿಗೆ ತಾಂತ್ರಿಕ ಇಂದೀಕರಣ (Upgradation) ಮತ್ತು ಸಮನ್ವಯ ಸಾಧಿಸುವುದು;

(ಈ) ಬೆಂಗಳೂರು-1 ಬ್ಯಾಂಕರ್‌ರವರೊಂದಿಗೆ ಸಮನ್ವಯ ಸಾಧಿಸುವುದು;

(ಉ) ಬೆಂಗಳೂರು-1 ಅರ್ಜಿಯನ್ನು ವಿನ್ಯಾಸಗೊಳಿಸುವುದು ಮತ್ತು ಮಾರಾಟಗಾರರೊಂದಿಗೆ ಸಮನ್ವಯ ಸಾಧಿಸುವುದು;

(ಊ) ಪ್ರಪತ್ರ ಮತ್ತು ರಶೀದಿಗಳನ್ನು ವಿನ್ಯಾಸಗೊಳಿಸುವುದು;

(ಋ) ಮಾರಾಟಗಾರರಿಗೆ ಹಣ ಪಾವತಿಸುವುದು;

(ಎ) ಸೇವಾ ಶುಲ್ಕಗಳನ್ನು ಸಂಗ್ರಹಿಸುವುದು;

(ಏ) ಹೊಸ ಸೇವೆಗಳನ್ನು ಗುರುತಿಸುವುದು;

(ಐ) 3ನೇ ಪಕ್ಷದಿಂದ ಲೆಕ್ಕತನಿಖೆ ಮಾಡಿಸುವುದು;

(ಒ) ಲೇಖನ ಸಾಮಗ್ರಿಗಳ ನಿರ್ವಹಣೆ; ಮತ್ತು

(ಔ) ಬೆಂಗಳೂರು-1 ಯೋಜನೆಗೆ ಸಂಬಂಧಿಸಿದಂತೆ ಇ-ಆಡಳಿತ ಸಚಿವಾಲಯವು ವಹಿಸುವ ಇತರ ಜವಾಬ್ದಾರಿಗಳು.

6. ಸಂಬಳ ಮತ್ತು ಕಛೇರಿ ನಿರ್ವಹಣೆ, ವಾಹನ ವೆಚ್ಚಗಳು ಮುಂತಾದ ಸಂಬಳೇತರ ವೆಚ್ಚಗಳು ವಾರ್ಷಿಕ ಮೊತ್ತವನ್ನು 16.20 ಲಕ್ಷ ರೂ.ಗಳೆಂದು ಅಂದಾಜುಪಡಿಸಲಾಗಿದ್ದು ಈ ವೆಚ್ಚವನ್ನು ವ್ಯವಹಾರ ನಿರ್ವಹಣಾ ವೆಚ್ಚಗಳ (Transaction Costs) ಸಂಗ್ರಹದಿಂದ ಭರಿಸತಕ್ಕದ್ದು. ಯೋಜನೆಯ ಪ್ರಾರಂಭದ ಹಂತದ ಒಂದು ವರ್ಷದವರೆಗೆ ವ್ಯವಹಾರ ನಿರ್ವಹಣೆ ವೆಚ್ಚಗಳ ಸಂಗ್ರಹಣೆ ಕನಿಷ್ಠ ಪ್ರಮಾಣದಲ್ಲಿರುವುದರಿಂದ, ಈ ಅವಧಿಯಲ್ಲಿ ಮೇಲೆ ಕಾಣಿಸಿದ ವೆಚ್ಚಗಳನ್ನು ಇ-ಆಡಳಿತ ಸಚಿವಾಲಯಕ್ಕೆ ಪ್ರಸಕ್ತ ವರ್ಷದ ಆಯವ್ಯಯದಲ್ಲಿ ನೀಡಲಾದ ಲೆಕ್ಕಶೀರ್ಷಿಕೆ "3451-00-090-2-04-059-ಇತರೆ ವೆಚ್ಚಗಳು (ಯೋಜನೆ)" ಅಡಿಯಲ್ಲಿ ಭರಿಸತಕ್ಕದ್ದು.

7. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1858 (ವೆಚ್ಚ-1) 04, ದಿನಾಂಕ: 4.11.2004 ರಲ್ಲಿ ಸಹಮತಿಸಿದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1254

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ, ಇ-ಆಡಳಿತ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಆ.ಸು.)

**ವಿಷಯ:** ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಒಂದು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯ ಸೃಜನೆ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಮಂತ್ರಿಯವರ ಸಚಿವಾಲಯದ ಟಿಪ್ಪಣಿ ಸಂಖ್ಯೆ: ಎಎಸ್‌ಸಿಎಂ ಎಂವಿ 04 : 2004, ದಿನಾಂಕ: 13.9.2004.

**ಪ್ರಸ್ತಾವನೆ:-**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಮುಖ್ಯಮಂತ್ರಿಯವರ ಸಚಿವಾಲಯದ ಮುಖ್ಯ ವಾಹಿನಿ ಕೋಶ, ವಿಧಾನಸೌಧ, ಬೆಂಗಳೂರು ಇಲ್ಲಿ ಶ್ರೀ ಕೆ.ಎನ್. ರಮೇಶ, ವಾಣಿಜ್ಯ ತೆರಿಗೆ ಅಧಿಕಾರಿ, 4ನೇ ವೃತ್ತ, ಮಂಗಳೂರು ಇವರು ದಿನಾಂಕ: 16.1.2004 ರಿಂದ ಕಾರ್ಯ ನಿರ್ವಹಿಸುತ್ತಿರುವುದರಿಂದ ಒಂದು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 80 ಸಸಿವಿ 2004, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2004**

ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ದಿನಾಂಕ: 16.1.2004 ರಿಂದ ಜಾರಿಗೆ ಬರುವಂತೆ 2 ವರ್ಷಗಳ ಅವಧಿಗೆ ಒಂದು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ಸೃಜಿಸಲಾಗಿದೆ.

ಈ ರೀತಿ ಸೃಜಿಸಿದ ಹುದ್ದೆಗೆ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆ ಅಧಿಕಾರಿಯಾಗಿರುವ ಶ್ರೀ ಕೆ.ಎನ್. ರಮೇಶ ರವರನ್ನು ದಿನಾಂಕ: 16.1.2004 ರಿಂದ ನಿಯೋಜಿಸಿ ನೇಮಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1711 ವೆಚ್ಚ-5:2004, ದಿನಾಂಕ: 7.10.2004 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1255

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

**ವಿಷಯ:** ಶ್ರೀ ಎಸ್. ಮೂರ್ತಿ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಆದೇಶ ಕ್ರಮಾಂಕ: ಸಿಆಸುಇ 196 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2004**

ಶ್ರೀ ಎಸ್. ಮೂರ್ತಿ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರು ಮೈಸೂರಿನ ಕರ್ನಾಟಕ ವಸ್ತು ಪ್ರದರ್ಶನ ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕರ್ನಾಟಕ ವಸ್ತು ಪ್ರದರ್ಶನ ಆವರಣದಲ್ಲಿ ಲೀಡ್ ಪೆವಿಲಿಯನ್ ಕಾಮಗಾರಿ

ನಿರ್ಮಾಣ ಮಾಡುವ ಕುರಿತಂತೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ನ್ನು ಉಲ್ಲಂಘಿಸಿದ ಆರೋಪಕ್ಕೆ ಕಾರಣರಾಗಿ ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎಸ್. ಮೂರ್ತಿ, ನಿವೃತ್ತ ಕೆ.ಎ.ಎಸ್. ಅಧಿಕಾರಿ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ಮೂರ್ತಿ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1256

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಇಲಾಖೆಯಲ್ಲಿ ಸೃಜಿಸಲಾಗಿರುವ ಹೆಚ್ಚುವರಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 96, ದಿನಾಂಕ: 20.9.1996.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 96, ದಿನಾಂಕ: 20.3.2002.
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 91 ಸಸಿವಿ 2003, ದಿನಾಂಕ: 29.12.2003.
4) ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಟಿಪ್ಪಣಿ ಸಂಖ್ಯೆ: ಐಡಿಡಿ 154 ಪಿಆರ್ಎಸ್ 2004, ದಿನಾಂಕ: 31.8.2004.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 20.9.1996ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಇಲಾಖೆ ಎಂಬ ಹೊಸ ಇಲಾಖೆಯನ್ನು ಸೃಜಿಸಲಾಗಿರುತ್ತದೆ. ನಂತರ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ದಿನಾಂಕ: 20.3.2002 ರ ಸರ್ಕಾರದ ಆದೇಶದಲ್ಲಿ ಈ ಇಲಾಖೆಯ ಈ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ದಿನಾಂಕ: 19.9.2002 ರವರೆಗೆ ಸೃಜಿಸಲಾಗಿರುತ್ತದೆ.

| ಕ್ರಮ ಸಂಖ್ಯೆ | ಹುದ್ದೆ | ವೇತನ ಶ್ರೇಣಿ ರೂ. | ಹುದ್ದೆಗಳ ಸಂಖ್ಯೆ |
|---|---|---|---|
| 1 | ನಿರ್ದೇಶಕರು | 12800-16720 | 01 |
| 2 | ಸಹಾಯಕ ನಿರ್ದೇಶಕರು<br>ಅ. ಪ್ರಾಜೆಕ್ಟ್ ಮಾನಿಟರ್ ಮತ್ತು ಎವಾಲ್ಯುಯೇಷನ್<br>ಆ. ಇನ್‌ವೆಸ್ಟರ್ಸ್ ಗೈಡೆನ್ಸ್ | 7400-13120 | 02 |
| 3 | ಸೀನಿಯರ್ ಪ್ರೋಗ್ರಾಮರ್ | 7400-13120 | 01 |
| 4 | ಜೂನಿಯರ್ ಪ್ರೋಗ್ರಾಮರ್ | 6000-11200 | 02 |
| 5 | ಆಪ್ತ ಸಹಾಯಕರು (ಶೀಘ್ರಲಿಪಿಗಾರರು ಹಾಗೂ ಇತರ ಪೂರಕ ಸಿಬ್ಬಂದಿ) | 4150-7800 | 03 |
| 6 | ಚಾಲಕ | 3000-5450 | 01 |

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ದಿನಾಂಕ: 31.8.2004 ರ ಟಿಪ್ಪಣಿಯಲ್ಲಿ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಇಲಾಖೆಯಲ್ಲಿ ಶ್ರೀ ಜಯಪ್ರಕಾಶ್, ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಮತ್ತೆ ಮುಂದುವರೆಸುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ; 29.12.2003 ರ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 19.9.2004 ರವರೆಗೆ ಮುಂದುವರೆಸಲಾಗಿದೆ. ಈ ಹುದ್ದೆಗಳ ಅವಧಿಯು ದಿನಾಂಕ: 19.9.2004 ಕ್ಕೆ ಕೊನೆಗೊಳ್ಳುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 75 ಸಸಿವಿ 2004, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಇಲಾಖೆಯಲ್ಲಿ ಸೃಜಿಸಲಾಗಿರುವ ಈ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ದಿನಾಂಕ: 20.9.2004 ರಿಂದ 19.9.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆ | ವೇತನ ಶ್ರೇಣಿ ರೂ. | ಹುದ್ದೆಗಳ ಸಂಖ್ಯೆ |
|---|---|---|---|
| 1 | ನಿರ್ದೇಶಕರು | 12800-16720 | 01 |
| 2 | ಸಹಾಯಕ ನಿರ್ದೇಶಕರು<br>ಅ. ಪ್ರಾಜೆಕ್ಟ್ ಮಾನಿಟರ್ ಮತ್ತು ಎವಾಲ್ಯುಯೇಷನ್<br>ಆ. ಇನ್‌ವೆಸ್ಟರ್ಸ್ ಗೈಡೆನ್ಸ್ | 7400-13120 | 02 |
| 3 | ಸೀನಿಯರ್ ಪ್ರೋಗ್ರಾಮರ್ | 7400-13120 | 01 |
| 4 | ಜೂನಿಯರ್ ಪ್ರೋಗ್ರಾಮರ್ | 6000-11200 | 02 |
| 5 | ಆಪ್ತ ಸಹಾಯಕರು (ಶೀಘ್ರಲಿಪಿಗಾರರು ಹಾಗೂ ಇತರ ಪೂರಕ ಸಿಬ್ಬಂದಿ) | 4150-7800 | 03 |
| 6 | ಚಾಲಕ | 3000-5450 | 01 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1257

ಯು.ಪಿ. ಪ್ರಭು

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ÕÝNïô0** ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಪಕರಾದ ಡಾಃ ಸೀತಾರಾಮಯ್ಯ ರವರ ಅಮಾನತ್ತು,

**L¹ÑñZ¹**ಃ ತಾಃ ೦೮.೦೭.೨೦೦೪ ಸಂಖ್ಯೆಃ ಎಲ್‌ಒಕೆಃಐಎಂವಿ(ಜಿ)ಃಎಂ-೬ಃಸಿಆರ್-೩ಃ೨೦೦೪(ಎಂವೈಎಸ್)ರ ಕರ್ನಾಟಕ ಲೋಕಾಯುಕ್ತದ ಅರಕ್ಷಕ ಮಹಾ ನಿರೀಕ್ಷಕರ ಪತ್ರ .

**Àó¢P0**

೧) ಮೈಸೂರು ಆಲನಹಳ್ಳಿ ಬಡಾವಣೆಯ ಲೇಃ ಎ .ಬಂಗಾರಪ್ಪ ರವರ ಮಗ ಶ್ರೀ ಬಿ.ನಾರಾಯಣರವರು ಮೈಸೂರು ಪೊಲೀಸ್ ವಿಭಾಗದ ಕರ್ನಾಟಕ ಲೋಕಾಯುಕ್ತ ಪೋಲೀಸುಠಾಣೆಯ ಪೋಲಿಸ್ ನಿರೀಕ್ಷಕರಿಗೆ ಲಿಖಿತ ದೂರಿನಂತೆ ಮೈಸೂರು ವೈದ್ಯಕೀಯ ಕಾಲೇಜಿನ ಬೋಧನಾ ಆಸ್ಪತ್ರೆಯಾದ ಕೆ.ಆರ್. ಆಸ್ಪತ್ರೆಯ ಶಸ್ತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಡಾಃ ಸೀತಾರಾಮಯ್ಯ ರವರು ಫಿರ್ಯಾದುದಾರರ ಎಲೆಕ್ಟ್ರಿಕ್ ಅಂಗಡಿಯಲ್ಲಿ ನೌಕರರಾದ ಬಸವರಾಜು ಎಂಬುವವರಿಗೆ ಹೊಟ್ಟೆನೋವು ಕಾಣಿಸಿಕೊಂಡಿದ್ದು ಅದನ್ನು ಶಸ್ತ್ರಚಿಕಿತ್ಸೆ ಮೂಲಕ ಗುಣಪಡಿಸಲು ಅಂದರೆ ಅಧಿಕೃತ ಸರ್ಕಾರಿ ಕೆಲಸವನ್ನು ಫಿರ್ಯಾದಿ ಯವರಿಗೆ ಮಾಡಲು ೧೦೦೦೦ರೂ.ಗಳ ಅಕ್ರಮ ಸಂಭಾವನೆಗಾಗಿ ಬೇಡಿ ಮುಂಗಡ ಲಂಚದ ಹಣವಾಗಿ ರೂ.೫೦೦೦ಗಳಿಗೆ ಫಿರ್ಯಾದುದಾರರನ್ನು ಒತ್ತಾಯಿಸಿದ್ದರು. ಫಿರ್ಯಾದುದಾರರು ಲಂಚದ ಹಣವನ್ನು ಕೊಡಲು ಇಷ್ಟಪಡದೆ ಮೈಸೂರು ಲೋಕಾಯುಕ್ತ ಪೋಲೀಸ್‌ಠಾಣೆಯಲ್ಲಿ ಲಿಖಿತ ದೂರನ್ನು ಸಲ್ಲಿಸಿದ್ದರು.

೨) ಮೇಲ್ಕಂಡ ಲಿಖಿತ ದೂರನ್ನು ಆಧರಿಸಿ , ಲೋಕಾಯುಕ್ತದ ಪೋಲೀಸ್ ನಿರೀಕ್ಷಕರು , ಮೈಸೂರು ಲೋಕಾಯುಕ್ತ ಪೋಲಿಸ್‌ಠಾಣೆಯಲ್ಲಿ ಸದರಿ ಆರೋಪಿತ ಸರ್ಕಾರಿನೌಕರರ ವಿರುದ್ದ ೧೯೮೮ರ ಭ್ರಷ್ಟಾಚಾರ ನಿರೋಧಕ ಅಧಿನಿಯಮದ ೭, ೧೩(೧)(ಡಿ) ಪ್ರಕರಣದೊಂದಿಗೆ ಓದಲಾದ ೧೩(೨)ನೇ ಪ್ರಕರಣದಡಿಯಲ್ಲಿ ಮೊಕದ್ದಮೆ ಸಂಖ್ಯೆಃ ೩ಃ೨೦೦೪ರ ಪ್ರಕರಣವನ್ನು ತಾಃ೨೩.೦೬.೨೦೦೪ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿದ್ದರು.

೩) ಪಂಚ ಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿಃ ೨೪.೦೬.೨೦೦೪ರಂದು ಕೆ.ಅರ್. ಆಸ್ಪತ್ರೆಯಲ್ಲಿ ಬೀಸಿದ ಬಲೆಯಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಡಾಃ ಸೀತಾರಾಮಯ್ಯರವರು ೫೦೦ರೂ.ಗಳ ಲಂಚದ ಹಣವನ್ನು ಪಿರ್ಯಾದಿಯವರಿಂದ ಕೇಳಿ ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿ ಹಾಕಿಕೊಂಡಿದ್ದರು. ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದ ಆರೋಪಿತ ಸರ್ಕಾರಿ ಅಧಿಕಾರಿಯವರ ಬಲಗೈ ಹಾಗೂ ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೊನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿದಾಗ ಬಲಗೈ ಬೆರಳುಗಳ ದ್ರಾವಣವು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು , ಆರೋಪಿತ ಸರ್ಕಾರಿ ಅಧಿಕಾರಿಯವರ ಬೆರಳುಗಳಲ್ಲಿ ಫಿನಾಪ್ತಲೀನ್ ಪುಡಿಯ ಅಸ್ತಿತ್ವವನ್ನು ಪ್ರಮಾಣೀಕರಿಸುವ ಮೂಲಕ ಆಪಾದಿತ ಸರ್ಕಾರಿ ಅಧಿಕಾರಿಯು ಲಂಚದ ಹಣವನ್ನು ಸ್ವೀಕರಿಸಿರುವ ಅಂಶವು ರುಜುವಾತಾಗಿರುತ್ತದೆ. ಆರೋಪಿತರಿಂದ ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

೪. ಆರೋಪಿತ ಸರ್ಕಾರಿ ಅಧಿಕಾರಿಯನ್ನು ಬಂಧಿಸಿ ತದನಂತರ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ. ಪ್ರಕರಣದ ತನಿಖೆಯು ಮುಂದುವರೆದಿದೆ. ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

೫. ಆದುದರಿಂದ ಆಪಾದಿತರ ವಿರುದ್ದ ನಡೆಸುವ ತನಿಖೆಗೆ ಅಡ್ಡಿ ಉಂಟುಮಾಡಿ ಹಸ್ತಕ್ಷೇಪ ಮಾಡುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಈ ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಕರ್ನಾಟಕ ಲೋಕಾಯುಕ್ತದ ಆರಕ್ಷಕ ಮಹಾ ನಿರೀಕ್ಷಕರು ಶಿಫಾರಸ್ಸು ಮಾಡಿದ್ದಾರೆ.

**àPñÌË B¹óÙ àNVï0 BPôP 289 HNHNá 2004, ÄNYçöÊô, º¼ñNP0 10ನೇ ನವೆಂಬರ್ 2004**

೬) ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಡಾಃ ಸೀತಾರಾಮಯ್ಯ ರವರನ್ನು ೧೯೫೭ರ ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮಾವಳಿಯ ೧೦(೧)(ಎ)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ವಿರುದ್ದ ಲೋಕಾಯುಕ್ತ ತನಿಖೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

೭) ಅವರ ಲೀನ್‌ನ್ನು ಮೈಸೂರು ವೈದ್ಯಕೀಯ ಕಾಲೇಜಿನಿಂದ ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಸ್ಥಳಾಂತರಿಸಲಾಗಿದೆ.

೮) ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ೯೮ನೇ ನಿಯಮದಡಿ ಲಭ್ಯವಾಗುವ ಜೀವನಾಂಶ ಭತ್ಯೆಯನ್ನು ಮಂಜೂರು ಮಾಡಲಾಗಿದೆ, ಹಾಗೂ ೧೦೪(೨)ನೇ ನಿಯಮದಡಿ ಅವರು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ .

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**Hàý.¼ñYÊñnô**

PR-1260

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ÕÝNïô0** ಮೈಸೂರು ವೈದ್ಯಕೀಯ ಕಾಲೇಜಿನ ನೇತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾಃ ಮಹೇಶ್ ಐ ಮುಗ್ದುಂ ರವರ ವಿರುದ್ದ ಅನಧಿಕೃತ ಗೈರುಹಾಜರಿ ದುರ್ನಡತೆ ಮೇಲೆ ಇಲಾಖೆ ವಿಚಾರಣೆ

**L¹ÑñZ¹**ಃ

೧. ತಾಃ ೦೮.೧೨.೨೦೦೦ ಸಂಖ್ಯೆಃ ಆಕುಕ ೯೮ ಎಂಎಂಸಿ ೯೯ ರ ಸರ್ಕಾರಿ ಆದೇಶ
೨. ತಾಃ ೦೯.೦೮.೯೯, ೨೯.೦೯.೯೯, ೨೭.೧೨.೨೦೦೧, ೦೪.೦೨.೨೦೦೨, ೨೬.೧೨.೨೦೦೨ ಮತ್ತು ೩೦.೦೪.೨೦೦೩ ಸಂಖ್ಯೆಃ ಎಸ್‌ಆರ್‌ಒ(೩)೦೧ಃ೧೯೯೬- ೯೭ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
೩. ತಾಃ ೦೩.೦೮.೯೯ ಸಂಖ್ಯೆಃ ಆಕುಕ ೯೮ ಎಂಎಂಸಿ ೯೯ರ ಕಾರಣ ಕೇಳುವ ನೋಟೀಸ್
೪. ತಾಃ ೨೪.೦೭.೯೯ ಸಂಖ್ಯೆಃ ಆಕುಕ ೧೨೮ ಎಂಎಂಸಿ ೯೯ರ ಅಧಿಸೂಚನೆ
೫. ತಾಃ ೧೮.೧೨.೯೭ ಮತ್ತು ೦೩.೦೧.೨೦೦೦ರ ಡಾಃ ಮಹೇಶ್ ಐ ಮುಗ್ದುಂರವರ ಅರ್ಜಿ
೬. ತಾಃ ೦೪.೦೮.೨೦೦೪ ಸಂಖ್ಯೆಃ ಆಕುಕ ೧೭೭ ಎಂಎಂಸಿ ೨೦೦೩ರ ೨ನೇ ಕಾರಣಕೇಳುವ ನೋಟೀಸ್

೭. ತಾ: ೨೩.೦೮.೨೦೦೪ ಹಾಗೂ ೩೦.೦೯.೨೦೦೪ರ ಡಾ: ಮಹೇಶ್ ಐ ಮುಗ್ದುಂರವರ ೨ನೇ ಕಾರಣ ಕೇಳುವ ಸೂಚನೆಗೆ ಲಿಖಿತ ಹೇಳಿಕೆಗಳು

**Àó¢P0**

೧) ಮೈಸೂರು ವೈದ್ಯಕೀಯ ಕಾಲೇಜಿನ ನೇತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ: ಮಹೇಶ್ ಐ ಮುಗ್ದುಂ ರವರು ತಾ: ೧೧.೦೧.೧೯೯೫ ರಿಂದ ವೈದ್ಯಕೀಯ ಕಾರಣಗಳ ಮತ್ತು ವೈಯುಕ್ತಿಕ ಕಾರಣಗಳಿಂದ ರಜೆ ಪತ್ರವನ್ನು ಸಲ್ಲಿಸಿ ತೆರಳಿದ್ದರು. ರಜೆ ಅವಧಿ ಅಂತ್ಯಗೊಂಡ ನಂತರ ಕರ್ತವ್ಯಕ್ಕೆ ಹಿಂತಿರುಗಿರಲಿಲ್ಲ. ನಿರಂತರವಾಗಿ ಅವರು ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರಾಗಿ ತೀವ್ರಸ್ವರೂಪದ ದುರ್ನಡತೆಯನ್ನು ಎಸಗಿ ಶಿಸ್ತಿನ ಕ್ರಮಕ್ಕೆ ಒಳಗಾಗಲು ಆಕರ್ಷಿತರಾಗಿದ್ದರು. ಆದಕಾರಣ ಅವರ ವಿರುದ್ದ ಇಲಾಖಾ ವಿಚಾರಣೆಯನ್ನು ೧೯೫೭ರ ಕೆಸಿಎಸ್(ಸಿಸಿಎ) ನಿಯಮಾವಳಿಯ ೧೧ನೇ ನಿಯಮದಡಿ ಹೂಡಲಾಗಿತ್ತು, ತಾ: ೦೩.೦೮.೯೯ರ ನೋಟೀಸ್‌ನಲ್ಲಿ ಅವರ ವಿರುದ್ದ ದೋಷರೋಪಣೆಯನ್ನು ರೂಪಿಸಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ನಿರ್ದೇಶಿಸಲಾಗಿತ್ತು, ತಾ: ೦೫.೦೧.೨೦೦೦ದ ಅವರ ಅರ್ಜಿಯಲ್ಲಿ ಅವರ ವಿರುದ್ದ ರೂಪಿಸಲಾಗಿದ್ದ ದೋಷಾರೋಪಣೆಯನ್ನು ಅಂಗೀಕರಿಸಿ ಅವರು ಸ್ವ-ಇಚ್ಛಾ, ನಿವೃತ್ತರಾಗಲು ಅನುಮತಿಸುವಂತೆ ಕೋರಿದ್ದರು. ಅದನ್ನು ಆಧರಿಸಿ ತಾ: ೦೮.೧೨.೨೦೦೦ದ ಸರ್ಕಾರಿ ಆದೇಶದಲ್ಲಿ ೧೯೫೭ರ ಕೆಸಿಎಸ್(ಸಿಸಿಎ) ನಿಯಮಾವಳಿಯ ೮(iii) ನೇ ನಿಯಮದಡಿ ಅವರ ಮೇಲೆ ಸಂಚಿತ ಪರಿಣಾಮ ಸಹಿತವಾಗಿ ೨ ವಾರ್ಷಿಕ ವೇತನ ಮುಂಬಡ್ತಿಗ್ಗಳನ್ನು ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು, ತಾ: ೧೭.೦೩.೯೮ರ ಅಧಿಸೂಚನೆಯಲ್ಲಿ ಅವರನ್ನು ಮೈಸೂರು ವೈದ್ಯಕೀಯ ಕಾಲೇಜಿನ ನೇತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ನೇಮಿಸಲಾಗಿತ್ತು, ಆದರೆ ಅವರು ಕರ್ತವ್ಯದ ಮೇಲೆ ಹಾಜರಾಗಿ ಕಾರ್ಯಭಾರ ವಹಿಸಿ ಕೊಳ್ಳಲಿಲ್ಲ. ಆದಕಾರಣ ತಾ: ೦೮.೧೨.೨೦೦೦ದ ಸರ್ಕಾರಿ ಆದೇಶದಲ್ಲಿ ವಿಧಿಸಲಾಗಿದ್ದ ಅವರ ೨ ವೇತನ ಮುಂಬಡ್ತಿಗ್ಗಳ ತಡೆಹಿಡಿಯುವ ದಂಡನೆ ಜಾರಿಗೊಳ್ಳದೆ ನಿಷ್ಫಲವಾಯಿತು. ಅವರು ಮತ್ತೆ ಅವಿರತವಾಗಿ ಕರ್ತವ್ಯದಿಂದ ಗೈರುಹಾಜರಿಯಲ್ಲಿ ಮುಂದುವರೆದರು. ಆದ್ದರಿಂದ ಈ ಹಿಂದೆ ವಿಧಿಸಿದ್ದ ಅವರ ೨ ವೇತನ ಮುಂಬಡ್ತಿಗ್ಗಳನ್ನು ತಡೆಹಿಡಿಯುವ ದಂಡನೆಯನ್ನು ೧೯೫೭ ಕೆಸಿಎಸ್(ಸಿಸಿಎ) ನಿಯಮಾವಳಿಯ ೨೬ನೇ ನಿಯಮದಡಿ ಪರಾಮರ್ಶಿಸುವುದು ಅತ್ಯಗತ್ಯವಾಯ್ತು, ಸದರಿ ನಿಯಮದಲ್ಲಿ ನಿರ್ದಿಷ್ಟಪಡಿಸಿರುವಂತೆ ಈ ಹಿಂದೆ ವಿಧಿಸಲಾಗಿದ್ದ ೨ ವೇತನ ಮುಂಬಡ್ತಿಗ್ಗಳ ತಡೆಹಿಡಿಯುವ ದಂಡನೆಯನ್ನು ಪರಾಮರ್ಶಿಸಿ ಕಠಿಣ ದಂಡನೆಯನ್ನು ವಿಧಿಸುವ ಪೂರ್ವದಲ್ಲಿ ಆಪಾದಿತರಿಗೆ ಸೂಕ್ತ ಅವಕಾಶವನ್ನು ಕಲ್ಪಿಸುವ ಹಿನ್ನೆಲೆಯಲ್ಲಿ ತಾ: ೦೪.೦೮.೨೦೦೪ರ ನೋಟೀಸನ್ನು ಅವರಿಗೆ ಜಾರಿ ಮಾಡಲಾಗಿತ್ತು, ತಾ: ೦೮.೧೨.೨೦೦೦ದ ಸರ್ಕಾರಿ ಆದೇಶದಲ್ಲಿ ವಿಧಿಸಲಾಗಿದ್ದ ೨ ವೇತನ ಮುಂಬಡ್ತಿಗ್ಗಳನ್ನು ತಡೆಹಿಡಿಯುವ ದಂಡನೆಯನ್ನು ಪರಾಮರ್ಶಿಸಿ ನಂತರ ಅದನ್ನು ಮಾರ್ಪಡಿಸಿ ಸೂಕ್ತ ದಂಡನೆಯನ್ನು ಏಕೆ ಹೆಚ್ಚಿಸಬಾರದು ಎಂಬ ವಿವರಣೆಯನ್ನು ೧೫ ದಿನಗಳ ಕಾಲಮಿತಿಯಲ್ಲಿ ಸಲ್ಲಿಸುವಂತೆ ಆಪಾದಿತರಿಗೆ ನಿರ್ದೇಶಿಸಲಾಗಿತ್ತು, ಸದರಿ ತಾ: ೦೪.೦೮.೨೦೦೪ರ ನೋಟೀಸಿಗೆ ಪೂರ್ವಭಾವಿಯಾಗಿ ತಾ: ೩೦.೦೯.೨೦೦೪ರಅವರ ಅರ್ಜಿಯಲ್ಲಿ ವಿವರಣೆಯನ್ನು ಸಲ್ಲಿಸಿದ್ದರು. ಅದರ ಸಾರಾಂಶ ಮುಂದಿನಂತಿದೆ.

೨. ಅವರು ದಿ: ೧೧.೦೧.೧೯೯೫ ರಿಂದ ವೈದ್ಯಕೀಯ ಕಾರಣಗಳ ಮತ್ತು ವೈಯುಕ್ತಿಕ ಕಾರಣಗಳಿಂದ ರಜೆ ಪತ್ರವನ್ನು ಸಲ್ಲಿಸಿ ತೆರಳಿದ್ದರು. ವೈಯುಕ್ತಿಕ ರಜೆ ನಂತರ ಕೆಲಸಕ್ಕೆ ಹಾಜರಾಗಲು ಆಸಕ್ತರಾಗಿದ್ದರು. ರಜೆಯುನ್ನು ವಿಸ್ತರಿಸಿದ ಪತ್ರವನ್ನು ಕಾಲಕಾಲಕ್ಕೆ ಸಲ್ಲಿಸಿದ್ದರು. ದಿ: ೧೮.೦೧.೧೯೯೭ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ಕೆಲಸಕ್ಕೆ ಹಾಜರಾಗಲು ಸೂಚನೆಗಳನ್ನು ನೀಡಲಾಗಿತ್ತು, ದಿ: ೨೪.೦೭.೧೯೯೭ರಂದು. ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರ ಮುಂದೆ ಹಾಜರಾಗಿದ್ದರು. ಆದರೆ, ಪ್ರಾಂಶುಪಾಲರು ಅವರ ಹಾಜರಿಯನ್ನು ಮನ್ನಿಸದೆ ಪುನ: ನೇಮಕಾತಿ ಆದೇಶವನ್ನು ತೆಗೆದುಕೊಂಡು ಬರಲು ಸೂಚನೆ ನೀಡಿದ್ದರು. ಆದಕಾರಣ, ಅವರು ದಿ: ೧೧.೦೩.೧೯೯೭ರಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಪತ್ರ ಬರೆದು ಆದೇಶ ನೀಡಲು ಕೇಳಿಕೊಂಡಿದ್ದರು. ದಿ: ೨೪.೦೨.೧೯೯೭ರಂದು ಕೆಲಸಕ್ಕೆ ಹಾಜರಾಗಿದ್ದ ಕಾರಣ ಅವರ ತಪ್ಪೇನು ಇರುವುದಿಲ್ಲವೆಂದು ವಾದಿಸಿದ್ದಾರೆ ದಿ: ೧೧.೧೧.೧೯೯೫ ರಿಂದ ಅವರು ಗೈರು ಹಾಜರಾಗಿರುವುದಾಗಿ ಹೇಳಿರುವುದು ಸರಿಯಲ್ಲ. ಅವರು ದಿ: ೨೪.೦೨.೧೯೯೭ ರಂದು ಕೆಲಸಕ್ಕೆ ಹಾಜರಾಗುವಾಗ ಪ್ರಾಂಶುಪಾಲರು ಕರ್ತವ್ಯಕ್ಕೆ ತೆಗೆದುಕೊಳ್ಳದೆ ಪುನ: ಆದೇಶ ತರಲು ಕಳುಹಿಸಿರುವುದು ಸರಿಯಲ್ಲ .ದಿ: ೧೧.೧೧.೧೯೯೫ ರಿಂದ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ದಿ: ೨೪.೦೨.೧೯೯೭ರವರೆಗೆ ಮುಂದುವರೆದಿದ್ದಾರೆ ಎಂಬುದು ಸರಿಯಲ್ಲ. ದಿ: ೨೪.೦೨.೧೯೯೭ರಂದು ಕೆಲಸಕ್ಕೆ ಹಾಜರಾಗಿ ಅವರು ಮನವಿ ಪತ್ರ ಸಲ್ಲಿಸಿದ್ದರು, ವಿನಾಕಾರಣ ವಿಳಂಬ ಮಾಡಿರುವುದರಿಂದ ಮತ್ತು ಅವರ ನೇಮಕಾತಿ ಆದೇಶ ನೀಡಲು ಕೇಳಿಕೊಂಡಿದ್ದರೂ ದಿ: ೧೮.೧೨.೧೯೯೭ರರೆಗೆ ಆದೇಶಗಳು ಬಂದಿರುವುದಿಲ್ಲ. ಇದಕ್ಕೆ ಆಡಳಿತ ಕಾರಣಗಳ ಹೊರತು, ಅವರಿಗೆ ಆದೇಶ ಬಾರದಿರುವುದರಿಂದ ಮಾನಸಿಕವಾಗಿ ಮತ್ತು ಆರ್ಥಿಕವಾಗಿ ಬೇಸತ್ತು ಸ್ವ-ಇಚ್ಛಾ, ನಿವೃತ್ತಿ ಹೊಂದಲು ಪರವಾನಿಗೆ ನೀಡದೆ ಅರ್ಜಿಯನ್ನು ತಿರಸ್ಕರಿಸಲಾಗಿದೆ. ದಿ: ೦೮.೧೨.೨೦೦೦, ಸಂಖ್ಯೆ: ಆಕುಕ ೯೮ ಎಂಎಂಸಿ ೯೯ರ ಸರ್ಕಾರಿ ಆದೇಶದಲ್ಲಿ ಅವರ ೨ ವಾರ್ಷಿಕ ವೇತನ ಮುಂಬಡ್ತಿಗ್ಗಳನ್ನು ತಡೆಹಿಡಿದು ಅವರ ಅನಧಿಕೃತ ಗೈರುಹಾಜರಿ ಅವಧಿಯ ಕಡತವನ್ನು ವಿಲೇವಾರಿ ಮಾಡಲಾಗಿದೆ. ತಕ್ಷಣವೇ ಅವರು ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರ ಮುಂದೆ ಹಾಜರಾಗಿದ್ದರು. ಆದರೆ, ಪ್ರಾಂಶುಪಾಲರು ಅವರ ಹಾಜರಾತಿ ಪತ್ರವನ್ನು ಅಂಗೀಕರಿಸದೆ ಅವರಿಗೆ ಖಾಲಿ ಹುದ್ದೆಯಿಲ್ಲವೆಂದು ತಿಳಿಸಿರುತ್ತಾರೆ. ವೈದ್ಯಕೀಯ ಶಿಕ್ಷಣ ನಿರ್ದೇಶಕರಿಂದ ಆದೇಶ ಪಡೆಯಲು ತಿಳಿಯಪಡಿಸಲಾಗಿದ್ದು ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನು ಆದೇಶ ನೀಡಲು ಕೇಳಿಕೊಂಡಿದ್ದರು. ಸರ್ಕಾರವು ದೋಷರೋಪಣೆಯನ್ನು ಕಳುಹಿಸಿದ್ದು, ಅದಕ್ಕೆ ಅವರು ಸಮಜಾಯಿಷಿಯನ್ನು ಸಲ್ಲಿಸಿದ್ದು ಸ್ವ-ಇಚ್ಛಾ ನಿವೃತ್ತಿ ಹೊಂದಲು ಅನುಮತಿಯನ್ನು ನೀಡಲು ಕೋರಿದ್ದರು. ಆದರೆ, ಅವರಿಗೆ ಯಾವುದೇ ಆದೇಶ ಬಂದಿರುವುದಿಲ್ಲ. ಆದಾಗ್ಯೂ ಸೂಚನಾ ಪತ್ರದಲ್ಲಿ ಸೇವೆಯಿಂದ ಏಕೆ ವಜಾ ಮಾಡಬಾರದು ಎಂಬುದಕ್ಕೆ ಕಾರಣವನ್ನು ಕೇಳಲಾಗಿದೆ. ಯಾವುದೇ ತರಹದ ವಿಚಾರಣೆ ನಡೆಸಿರುವುದಿಲ್ಲ. ೧೯೫೭ರ ಕೆಸಿಎಸ್ (ಸಿಸಿಎ) ನಿಯಮಾವಳಿಯ ಮೇರೆಗೆ ಉಗ್ರವಾದ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಮೊದಲು ವಿಚಾರಣೆ ನಡೆಸಿ ದೋಷರೋಪಗಳ ಮೇಲೆ ವಿವರಗಳನ್ನು ನೀಡಲು ಅವಕಾಶ ನೀಡದೆ ಉಗ್ರವಾದ ದಂಡನೆ ವಿಧಿಸುವುದು ಕಾನೂನು ಮತ್ತು ಮಾನವೀಯತೆ ರೀತ್ಯ ನ್ಯಾಯವಲ್ಲ. ಮೇಲಿನ ಕಾರಣಗಳಿಂದ ಅವರು ಕೆಲಸಕ್ಕೆ ಸೇರಲು ಅವಕಾಶ ನೀಡುವಂತೆ ಕೋರಿದ್ದರು. ಪರ್ಯಾಯವಾಗಿ ದಿ: ೨೪.೦೨.೧೯೯೭ ರಿಂದ ಅಥವಾ ಮುಂದಿನ ದಿನಾಂಕದಿಂದ ಸ್ವ-ಇಚ್ಛಾ ನಿವೃತ್ತಿ ಹೊಂದಲು ಪರವಾನಿಗೆ ನೀಡುವಂತೆ ಕೇಳಿಕೊಳ್ಳುತ್ತಾ ಅವರ ಮನವಿಯನ್ನು ನ್ಯಾಯುತವಾಗಿ ಪರಿಗಣಿಸುವಂತೆ ಪ್ರಾರ್ಥಿಸಿದ್ದರು.

೩) ಅಂತಿಮ ಆದೇಶ ಹೊರಡಿಸುವ ಪೂರ್ವದಲ್ಲಿ ಅವರು ತಾ: ೩೦.೦೯.೨೦೦೪ರ ಅರ್ಜಿಯನ್ನು ಸಲ್ಲಿಸಿ ತಾ: ೦೪.೦೮.೨೦೦೪ರ ಕಾರಣ ಕೇಳುವ ನೋಟೀಸಿಗೆ ನೀಡಿರುವ ವಿವರಣೆಗೆ ಹೆಚ್ಚುವರಿ ಅಂಶಗಳನ್ನು ಮತ್ತು ೮ ದಾಖಲಾತಿಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸಿದ್ದಾರೆ. ಅವರು ಹೆಚ್ಚುವರಿಯಾಗಿ ಸಲ್ಲಿಸಿರುವ ವಿವರಣೆಯ ಸಂಕ್ಷಿಪ್ತತೆ ಈ ಮುಂದಿನಂತಿದೆ.

೪) ಅವರು ೧೯೭೫ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಸೇವೆಗೆ ಸೇರಿ ಗ್ರಾಮಾಂತರ ಪ್ರದೇಶಗಳಲ್ಲಿ ಕರ್ತವ್ಯ ನಿರ್ವಹಿಸಿ ೧೯೮೭ರಲ್ಲಿ ಸೇವಾನಿರತರಾಗಿದ್ದಾಗ ವೃಂದ ಬದಲಾವಣೆಯ ನಂತರ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು ನೇತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರಾಗಿ ಧಾರಣ ಮಾಡಿದ್ದರು. ತಾ: ೧೩.೧೧.೯೫ರಿಂದ ಕೆಲವು ಕೌಟುಂಬಿಕ ಕಾರಣಗಳ ಮೇಲೆ ರಜೆಯನ್ನು ಪಡೆದಿದ್ದರು. ರಜೆಯಲ್ಲಿರುವಾಗ ನಂತರದ ಅವಧಿಗೆ ಕೂಡ ರಜೆ ವಿಸ್ತರಿಸುವಂತೆ ಕೋರಿದ್ದರು, ಮುಂದುವರೆದು ತಾ: ೦೯.೧೧.೯೬ ರಿಂದ ೦೨.೦೫.೯೭ರ ವರೆಗಿನ ಅವಧಿಗೆ ರಜೆಯನ್ನು ವಿಸ್ತರಿಸುವಂತೆ ಕೋರಿದ್ದರು. ವೈದ್ಯಕೀಯ ಶಿಕ್ಷಣ ನಿರ್ದೇಶಕರು ತಾ: ೧೮.೦೧.೯೭ರ ನಡವಳಿಯಲ್ಲಿ ತಾ: ೦೯.೧೧.೯೬ ರಿಂದ ತಾ: ೧೨.೦೫.೯೭ರ ವರೆಗಿನ ಅವಧಿಗೆ ಅಸಾಧಾರಣ ರಜೆಯನ್ನು ತಿರಸ್ಕರಿಸಲಾಗಿದೆಯೆಂದು ಸೂಚಿಸಿ ಕೂಡಲೆ ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರ

ಮುಂದೆ ಕರ್ತವ್ಯಕ್ಕೆ ಹಾಜರಾಗುವಂತೆ ನಿರ್ದೇಶಿಸಿದ್ದರು. ಅದರ ಪ್ರಕಾರ ತಾ: ೨೪.೦೨.೯೭ರಂದು ಕರ್ತವ್ಯಕ್ಕೆ ಹಾಜರಾಗಿದ್ದರು. ಆದರೆ ಪ್ರಾಂಶುಪಾಲರು ಅವರು ಕರ್ತವ್ಯ ನಿರ್ವಹಿಸಲು ಅವಕಾಶ ನೀಡದೆ ವೈದ್ಯಕೀಯ ಶಿಕ್ಷಣ ನಿರ್ದೇಶಕರಿಂದ ಸ್ಪಷ್ಟೀಕರಣವನ್ನು ಕೇಳಿದ್ದರು. ಅವರು ಸಹಾ ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನು ಸಂಪರ್ಕಿಸಿ ಸಾಧ್ಯವಾದಲ್ಲಿ ಬೆಂಗಳೂರಿನ ಯಾವುದಾದರೊಂದು ಹುದ್ದೆಯಲ್ಲಿ ನಿಯೋಜಿಸುವಂತೆ ಕೋರಿದ್ದರು. ತಾ: ೨೪.೦೨.೯೭ರ ನಂತರ ನೇಮಕಾತಿ ಆದೇಶವನ್ನು ಕಾಯುತ್ತಾ ಕಾಲಕಳೆದಿದ್ದರು. ೧೦ ತಿಂಗಳ ನಂತರವೂ ಅವರನ್ನು ಕೆಲಸಕ್ಕೆ ತೆಗೆದುಕೊಳ್ಳುವಂತೆ ಪ್ರಾಂಶುಪಾಲರಿಗೆ ತಿಳಿಸಿರಲಿಲ್ಲ. ಬೇರೆ ಸ್ಥಳಕ್ಕೆ ನಿಯೋಜಿಸಿರಲಿಲ್ಲ. ಅನಿವಾರ್ಯವಾಗಿ ಸೇವೆಯಿಂದ ನಿವೃತ್ತರಾಗಬಯಸಿ ಮೇಲ್ಕಂಡ ಎಲ್ಲಾ ಅಂಶಗಳನ್ನು ವಿವರಿಸಿ ತಾ: ೧೩.೧೧.೯೫ ರಿಂದಲೇ ಅನ್ವಯವಾಗುವಂತೆ ಸ್ವಯಂ-ನಿವೃತ್ತರಾಗಲು ಲಿಖಿತ ಕೋರಿಕೆ ಸಲ್ಲಿಸಿದ್ದರು ಎಂದು ತಿಳಿಸಿದ್ದಾರೆ. ಸ್ವ-ಇಚ್ಛಾ ನಿವೃತ್ತಿಗೆ ಅನುಮತಿ ನೀಡುವುದಕ್ಕೆ ಪೂರ್ವಾನುಭಾವಿಯಾಗಿ ಬೇಬಾಕಿ ಪ್ರಮಾಣ ಪತ್ರಗಳನ್ನು ಪಡೆಯಲು ಪ್ರಾರಂಭಿಸಿದ್ದರಿಂದ ಸ್ವ-ಇಚ್ಛಾ ನಿವೃತ್ತಿಗೆ ಅನುಮತಿಯನ್ನು ನಿರೀಕ್ಷಿಸುತ್ತಾ ಇದ್ದ ಹಿನ್ನೆಲೆಯಲ್ಲಿ ತಾ: ೧೭.೦೩.೯೮ರ ಅಧಿಸೂಚನೆಯಲ್ಲಿ ಮೈಸೂರು ವೈದ್ಯಕೀಯ ಕಾಲೇಜಿನ ನೇತ್ರಚಿಕಿತ್ಸಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ನೇಮಕಾತಿ ಆದೇಶ ನೀಡಿದ್ದರೂ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರಲಿಲ್ಲ. ವಾಸ್ತವವಾಗಿ ತಾ: ೧೩.೧೧.೯೫ ರಿಂದ ರಜೆ ಮೇಲೆ ತೆರಳಿದ್ದು ತಾ: ೨೪.೦೨.೯೭ ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದರೂ ತಾ: ೧೭.೦೩.೯೮ರಲ್ಲಿ ನೇಮಕಾತಿ ಆದೇಶ ನೀಡಲಾಗಿತ್ತು, ಆದ್ದರಿಂದ ತಾ: ೨೪.೦೨.೯೭ ರಿಂದ ೧೭.೦೩.೯೮ರ ವರೆಗಿನ ಅವಧಿಯನ್ನು ಕಡ್ಡಾಯ ನಿರೀಕ್ಷಣಾವಧಿಯೆಂದು ಘೋಷಿಸಬೇಕಾಗಿರುವುದು ನಿಯಮಾನುಸಾರವಾಗಿದೆಯೆಂದು ಪ್ರತಿಪಾದಿಸಿರುತ್ತಾರೆ. ಸ್ವ-ಇಚ್ಛಾ ನಿವೃತ್ತರಾಗಲು ಅನುಮತಿ ನಿರೀಕ್ಷಣೆಯಲ್ಲಿ ಅವರು ಕರ್ತವ್ಯಕ್ಕೆ ಹಾಜರಾಗದೆ ಇದ್ದರು. ೨ ವರ್ಷಗಳ ನಂತರ ಅವರ ಸ್ವ-ಇಚ್ಛಾ ನಿವೃತ್ತಿ ಕೋರಿಕೆಯನ್ನು ಸರ್ಕಾರ ಪರಿಶೀಲಿಸಿ ಅವರ ವಿರುದ್ಧ ಶಿಸ್ತುಕ್ರಮ ಬಾಕಿ ಇರುವುದರಿಂದ ಅನುಮತಿಸಲು ಸಾಧ್ಯವಿಲ್ಲವೆಂದು ೨೯.೧೦.೯೯ ಸಂಖ್ಯೆ: ಆಕುಕ ೧೫ ಎಂಎಂಸಿ ೯೮ರ ಸರ್ಕಾರಿ ಪತ್ರದಲ್ಲಿ ತಿಳಿಯಪಡಿಸಲಾಗಿದ್ದು ತಾ: ೧೩.೧೧.೯೫ರಿಂದ ಅವರು ಅನಧಿಕೃತವಾಗಿ ಗೈರುಹಾಜರಾಗಿದ್ದರು ಎಂಬ ದೋಷರೋಪಣೆಯ ಮೇಲೆ ತಾ: ೦೩.೦೮.೯೯ ಸಂಖ್ಯೆ: ಆಕುಕ ೯೮ ಎಂಎಂಸಿ ೯೮ರ ನೋಟೀಸನ್ನು ಜಾರಿ ಮಾಡಲಾಗಿತ್ತು, ೨೪.೦೨.೯೭ ರಿಂದ ಅವರು ಕರ್ತವ್ಯಕ್ಕೆ ಹಾಜರಾಗಿದ್ದರು ಕರ್ತವ್ಯಕ್ಕೆ ತೆಗೆದುಕೊಳ್ಳುವ ಪ್ರಾಧಿಕಾರವು ಸ್ಪಷ್ಟ ಕಾರಣ ಕೋರಿದ್ದ ಹಿನ್ನೆಲೆಯಲ್ಲಿ ತಾ: ೧೭.೦೩.೯೮ ರ ನಿಯುಕ್ತಿ ಆದೇಶನೀಡಿದ್ದರೂ ತಾ: ೨೪.೦೨.೯೭ ರಿಂದ ೧೭.೦೩.೯೮ರ ವರೆಗೆ ಅವರು ಕಡ್ಡಾಯ ನಿರೀಕ್ಷಣಾವಧಿಯಲ್ಲಿದ್ದಾಗ್ಯೂ ಅದನ್ನು ನಮೂದಿಸದೆ ನೇರವಾಗಿ ತಾ: ೧೩.೧೧.೯೫ ರಿಂದಲೇ ಕರ್ತವ್ಯಕ್ಕೆ ಗೈರುಹಾಜರಾಗಿರುವುದಾಗಿ ದೋಷಾರೋಪಣೆ ಮಾಡಿರುವುದು ಸತ್ಯಕ್ಕೆ ದೂರವಾದ ವಿಷಯವಾಗಿರುತ್ತದೆ. ಸ್ವ-ಇಚ್ಛಾ ನಿವೃತ್ತಿ ಹೊಂದಬೇಕೆನ್ನುವ ನಿರ್ಧಾರ ಕೈಗೊಂಡಿದ್ದರಿಂದ ಮತ್ತು ಅವರ ಅಂತಹ ಕೋರಿಕೆ ಪರಿಶೀಲನೆಯಲ್ಲಿ ಬಾಕಿ ಇದ್ದುದರಿಂದ ಅವರ ವಿರುದ್ಧದ ದೋಷರೋಪಣೆಗಳನ್ನು ನಿರಾಕರಿಸುವುದಕ್ಕೆ ಆಲೋಚನೆ ಮಾಡಿರಲಿಲ್ಲ. ಅವರ ಸ್ವ-ಇಚ್ಛೆ ನಿವೃತ್ತಿಯನ್ನು ತಿರಸ್ಕರಿಸಿದ್ದರಿಂದ ಅವರು ವೈದ್ಯಕೀಯ ಶಿಕ್ಷಣ ಇಲಾಖೆಯ ಕಾರ್ಯದರ್ಶಿರವರನ್ನು ಭೇಟಿ ಮಾಡಿ ಎಲ್ಲಾ ಅಂಶಗಳನ್ನು ವಿವರಿಸಿದ್ದರು. ಸ್ವಯಂ ನಿವೃತ್ತಿ ಕೋರಿಕೆಯನ್ನು ಪರಿಗಣಿಸಲೇ ಬೇಕಾದಲ್ಲಿ ಇಲಾಖಾ ವಿಚಾರಣೆ ಮುಕ್ತಾಯಗೊಳಿಸಬೇಕಾಗಿರುವುದರಿಂದ ಮತ್ತು ಆಪಾದನೆಗಳನ್ನು ಒಪ್ಪಿಕೊಂಡಲ್ಲಿ ಲಘು ದಂಡನೆಯನ್ನು ವಿಧಿಸಿ ಸ್ವಯಂ ನಿವೃತ್ತಿ ಕೋರಿಕೆಯನ್ನು ಅನುಮತಿಸಲು ಸಾಧ್ಯವಾಗುವುದು ಎಂದು ತಿಳಿಸಿದ ಕಾರಣ ಅವರು ಲಿಖಿತವಾಗಿ ದೋಷರೋಪಣೆಯನ್ನು ಒಪ್ಪಿಕೊಂಡು ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಮತ್ತು ಸ್ವ-ಇಚ್ಛಾ ನಿವೃತ್ತಿಗೆ ಅನುಮತಿಸುವಂತೆ ಕೋರಿದ್ದರು. ಅದರಂತೆ ತಾ: ೦೮.೧೨.೨೦೦೦ ಸಂಖ್ಯೆ: ಆಕುಕ ೯೮ ಎಂಎಂಸಿ ೯೮ರ ಸರ್ಕಾರಿ ಆದೇಶದಲ್ಲಿ ಅವರ ಎರಡು ವಾರ್ಷಿಕ ವೇತನ ಮುಂಬಡ್ತಿಗಳನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು, ಅದರ ಹಿನ್ನೆಲೆಯಲ್ಲಿ ಅದಕ್ಕೆ ಪೂರಕವಾಗಿ ಅವರ ಸ್ವ-ಇಚ್ಛಾ ನಿವೃತ್ತಿ ಕೋರಿಕೆಯನ್ನು ಸರ್ಕಾರ ಪರಿಗಣಿಸುತ್ತಿದೆ ಎಂಬ ನಿರೀಕ್ಷಣೆಯಲ್ಲಿದ್ದರು. ತಾ: ೦೫.೧೧.೨೦೦೦ರ ಅವರ ಅರ್ಜಿಯಲ್ಲಿ ನೀಡಿದ್ದ ಸ್ವ-ಇಚ್ಛಾ ನಿವೃತ್ತಿ ಕೋರಿಕೆಯನ್ನು ತಿರಸ್ಕರಿಸಿದ ಅಥವಾ ಪುರಸ್ಕರಿಸಿದ ಯಾವುದೇ ನಿರ್ಧಾರ ಸಾಕಷ್ಟು ಕಾಲಾವಕಾಶದ ನಂತರ ಅವರಿಗೆ ಸ್ವೀಕೃತವಾಗದ ಕಾರಣ ತಾ: ೦೮.೦೩.೨೦೦೪ರಿಂದ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿದ್ದರು. ತಾ: ೧೭.೦೫.೨೦೦೪ ಸಂಖ್ಯೆ: ಆಕುಕ ೧೭೭ ಎಂಎಂಸಿ ೨೦೦೪ರ ಸರ್ಕಾರಿ ಪತ್ರದಲ್ಲಿ ದುರ್ನಡತೆಯ ಮೇಲೆ ಸರ್ಕಾರ ಹೊರಡಿಸುವ ಆದೇಶವನ್ನು ನಿರೀಕ್ಷಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ತಿಳಿಸಲಾಗಿತ್ತು, ಅದರಿಂದ ಕರ್ತವ್ಯಕ್ಕೆ ಹಾಜರಾಗುವ ಅವರನ್ನು ವಂಚಿತರನ್ನಾಗಿ ಮಾಡಲಾಗಿದೆಯೆಂದು ವಾದಿಸಿದ್ದಾರೆ. ಈ ರೀತಿ ಮೊದಲನೆ ಸಲ ಕರ್ತವ್ಯಕ್ಕೆ ಹಾಜರಾಗದಿರುವುದು ಮತ್ತು ಅನಧಿಕೃತ ಗೈರುಹಾಜರಿಗೆ ಲಘುದಂಡನೆಯನ್ನು ವಿಧಿಸಿ ಸ್ವ-ಇಚ್ಛಾ ನಿವೃತ್ತಿ ಕೋರಿಕೆಯನ್ನು ಪರಿಶೀಲಿಸಿ ಅನುಮತಿಸುವುದಾಗಿ ಕಾರ್ಯದರ್ಶಿಯವರು ತಿಳಿಸಿದ್ದರೂ ಸಹ ಕೇವಲ ದಂಡನೆಯನ್ನು ವಿಧಿಸಿ ಸ್ವ-ಇಚ್ಛಾ ನಿವೃತ್ತಿ ಕೋರಿಕೆಯನ್ನು ತಿರಸ್ಕರಿಸದೇ ಇರುವ ಹಿನ್ನೆಲೆಯಲ್ಲಿ ತಾ: ೦೪.೦೮.೨೦೦೪ರ ನೋಟೀಸ್‌ನಲ್ಲಿ ಈ ಹಿಂದೆ ತಾ: ೧೮.೧೨.೨೦೦೦ದ ಸರ್ಕಾರಿ ಆದೇಶದ ರೀತಿಯ ವಿಧಿಸಿದ್ದ ದಂಡನೆಯನ್ನು ಈಗ ಪರಾಮರ್ಶಿಸುವುದು ಮತ್ತು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ಸರ್ಕಾರ ನಿರ್ಧರಿಸುವುದು ನ್ಯಾಯೋಚಿತವಾಗಿರುವುದಿಲ್ಲ. ಮೇಲೆ ತಿಳಿಸಿದ ವಾಸ್ತವಾಂಶಗಳನ್ನು ಕೂಲಂಕಷವಾಗಿ ಪರಿಶೀಲಿಸದೆ ನಿರ್ಧಾರ ತೆಗೆದುಕೊಂಡಿರುವುದು ನಿಯಮಾವಳಿಗಳಿಗೆ ವಿರುದ್ಧವಾಗಿದೆ. ಶಿಕ್ಷೆಯನ್ನು ವಿಧಿಸಲು ನಿರ್ಧರಿಸಿರುವುದರ ಮೇಲೆ ವಿವರಣೆಯನ್ನು ಕೋರಿರುವಂತಹ ಸ್ಥಿತಿಯು ಅಸಮರ್ಪಕ ಮತ್ತು ಅಸಂವಿಧಾನಕವಾಗಿರುತ್ತದೆ. ಮೇಲ್ಕಂಡ ನೈಜ ಅಂಶಗಳ ಹಿನ್ನೆಲೆಯಲ್ಲಿ ತಾ: ೦೪.೦೮.೨೦೦೪ರ ಸರ್ಕಾರಿ ಪತ್ರದಲ್ಲಿ ತಿಳಿಯಪಡಿಸಿರುವಂತೆ ಈಗಾಗಲೇ ವಿಧಿಸಿರುವ ದಂಡನೆಯನ್ನು ಹೆಚ್ಚಿಸಲು ಉದ್ದೇಶಿಸಿರುವ ಕ್ರಮವನ್ನು ಕೈಬಿಡುವಂತೆ ಅವರು ಕೋರಿದ್ದಾರೆ. ತಾ: ೧೩.೧೧.೯೫ ರಿಂದ ತಾ: ೨೩.೦೨.೯೫ ರವರೆಗೆ ಅಸಾಧಾರಣ ರಜೆಯನ್ನು ತಾ: ೨೪.೦೨.೯೭ ರಿಂದ ೧೭.೦೩.೯೮ರ ವರೆಗಿನ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಲು ಹಾಗೂ ೧೮.೦೩.೯೮ ರಿಂದ ೦೭.೦೩.೨೦೦೪ರವರೆಗೆ ಅಸಾಧಾರಣ ರಜೆ ಮಂಜೂರು ಮಾಡುವುದಲ್ಲದೆ ತಾ:೦೮.೦೩.೨೦೦೪ ರಿಂದ ಸ್ಥಳ ನಿಯುಕ್ತಿಗೊಳಿಸುವ ಆದೇಶ ಹೊರಡಿಸುವವರೆಗಿನ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಘೋಷಿಸಲು ಕೋರಿದ್ದಾರೆ. ಒಂದು ವೇಳೆ ಕರ್ತವ್ಯಕ್ಕೆ ಹಾಜರಾಗಲು ಅವಕಾಶ ನೀಡದಿದ್ದಲ್ಲಿ ತಾ: ೦೩.೧೨.೨೦೦೦ ಸಂಖ್ಯೆ: ಆಕುಕ ೯೮ ಎಂಎಂಸಿ ೯೮ರ ಸರ್ಕಾರಿ ಆದೇಶದಲ್ಲಿ ವಿಧಿಸಿದ್ದ ಲಘು ದಂಡನೆಯನ್ನಾಧರಿಸಿ ತಾ: ೦೫.೧೧.೨೦೦೦ರಂದು ನೀಡಿರುವ ಸ್ವ-ಇಚ್ಛಾ ನಿವೃತ್ತಿ ಕೋರಿಕೆಯನ್ನು ಪರಿಗಣಿಸಿ ಅನುಮತಿಸುವಂತೆ ಕೋರಿದ್ದಾರೆ. ೨ನೇಯ ಪ್ರಾರ್ಥನೆ ಅನುಸಾರ ಸ್ವ-ಇಚ್ಛಾ ನಿವೃತ್ತಿಯನ್ನು ಪರಿಗಣಿಸಲು ಸಾಧ್ಯವಾಗದಿದ್ದಲ್ಲಿ ತಾ: ೦೧.೧೦.೨೦೦೪ರಿಂದ ಅನ್ವಯವಾಗುವಂತೆ ಅನುಮತಿಸಿದ್ದಲ್ಲಿ ಅದಕ್ಕೆ ಅವರು ಬದ್ಧರಾಗಿರುವುದಾಗಿ ಮತ್ತು ಸ್ವಇಚ್ಛಾ ನಿವೃತ್ತಿಗೆ ಮುನ್ಸೂಚನೆ ನೀಡಲು ಕಾಲಾವಕಾಶವಿಲ್ಲದಿರುವುದರಿಂದ ಅದನ್ನು ಮನ್ನಾ ಮಾಡಲು ಕೋರಿದ್ದಾರೆ.

೫) ಆಪಾದಿತರು ಸಲ್ಲಿಸಿರುವ ಸಕಲ ವಿವರಣೆಯನ್ನು ಅಮೂಲಾಗ್ರವಾಗಿ ಮತ್ತು ಕೂಲಂಕಷವಾಗಿ ಸಕಲವಲಯಗಳಿಂದ ವಿಶ್ಲೇಷಿಸಲಾಗಿದೆ. ಪೂರ್ವಭಾವಿಯಾಗಿ ಆಪಾದಿತರು ವೈದ್ಯಕೀಯ ಶಿಕ್ಷಣ ಕಾರ್ಯದರ್ಶಿಯವರನ್ನು ಭೇಟಿಯಾಗಿದ್ದರೂ ಮತ್ತು ಅವರು ಅಪಾದಿತರ ಮೇಲೆ ಲಘುದಂಡನೆಯನ್ನು ವಿಧಿಸಿ ಅದಕ್ಕೆ ಪೂರಕವಾಗಿ ಸ್ವ-ಇಚ್ಛಾ ನಿವೃತ್ತಿಗೆ ಅನುಮತಿಸುವುದಾಗಿ ತಿಳಿಸಿದ್ದರು ಎಂಬ ಹೇಳಿಕೆಯನ್ನು ನಿರ್ದಿಷ್ಟವಾಗಿ ಮತ್ತು ನೇರವಾಗಿ ನಿರಾಕರಿಸಲಾಗಿದೆ ಹಾಗೂ ಅಲ್ಲಗಳೆಯಲಾಗಿದೆ. ಅದು ಯಾವುದೇ ದಾಖಲೆಗಳಿಂದ ಬಿಂಬಿತವಾಗಿಲ್ಲ. ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಆಪಾದಿತರು ತಾ: ೧೩.೧೧.೧೯೫ ರಿಂದ ಕರ್ತವ್ಯಕ್ಕೆ ನಿರಂತರವಾಗಿ ಗೈರುಹಾಜರಾಗಿದ್ದರು ಎಂಬುದು ದಾಖಲೆಗಳಿಂದ ಸ್ಪಷ್ಟವಾಗಿ ಬಿಂಬಿತವಾಗಿರುತ್ತದೆ. ರಜೆ ಮಂಜೂರಾತಿ ಪಡೆಯದೆ ಕರ್ತವ್ಯದಿಂದ ಗೈರುಹಾಜರಾಗಿರುವುದು ಒಂದು ತೀವ್ರಸ್ವರೂಪದ ದುರ್ನಡತೆಯಾಗಿರುತ್ತದೆ. ಅದಕ್ಕೆ ಶಿಸ್ತಿನ ಕ್ರಮ ಕೈಗೊಳ್ಳಬೇಕು. ರಜೆ ಮಂಜೂರಾತಿಯನ್ನು ಪಡೆಯದೆ ಕರ್ತವ್ಯಕ್ಕೆ ಗೈರುಹಾಜರಾದಲ್ಲಿ ಅದು ಅನಧಿಕೃತ ಗೈರುಹಾಜರಾಗಿದೆಯೇ ಹೊರತು ಅಧಿಕೃತ ಎಂದು ಪರಿಗಣಿಸುವಂತಿಲ್ಲ.

ರಜೆ ಅರ್ಜಿಯನ್ನು ನೀಡಿದಾಕ್ಷಣ ರಜೆ ಮಂಜೂರು ಮಾಡಿದಂತಾಗುವುದಿಲ್ಲ. ಅದನ್ನು ಮಂಜೂರು ಮಾಡಿಸಿಕೊಂಡ ನಂತರವೇ ರಜೆಯನ್ನು ಉಪಯೋಗಿಸಿಕೊಳ್ಳಬೇಕು. ಪ್ರತಿಯೊಬ್ಬ ಸರ್ಕಾರಿ ನೌಕರರು ಕರ್ತವ್ಯನಿರತರಾಗಬೇಕು ಅಥವಾ ರಜೆ ಮಂಜೂರಾತಿಯನ್ನು ಪಡೆದು ರಜೆಯನ್ನು ಬಳಸಿಕೊಳ್ಳಬಹುದು. ಗೈರುಹಾಜರಾಗಿರುವುದು ಅನಧಿಕೃತವಾಗಿದೆ. ಅವರ ವರ್ತನೆಯನ್ನು ವಿಶ್ಲೇಷಿಸಿದಲ್ಲಿ ೧೯೬೬ ಕೆಸಿಎಸ್(ನಡತೆ) ನಿಯಮಾವಳಿಯ ೩ನೇ ನಿಯಮದಲ್ಲಿ ಪ್ರತಿಯೊಬ್ಬ ಸರ್ಕಾರಿ ನೌಕರರು ಹೊಂದಿರಬೇಕಾದ ಅತ್ಯಂತ ಶ್ರದ್ಧೆ, ಭಕ್ತಿ, ಆಸಕ್ತಿ, ನೀತಿ ಮತ್ತು ನಿಷ್ಠೆಯನ್ನು ಹೊಂದಿರಲಿಲ್ಲವೆಂಬುದು ವೇದ್ಯವಾಗುತ್ತದೆ. ಕೆಸಿಎಸ್ಆರ್‌ನ ೧೦೭ನೇ ನಿಯಮದಡಿ ರಜೆಯನ್ನು ಹಕ್ಕು ಎಂದು ಪರಿಗಣಿಸತಕ್ಕದ್ದಲ್ಲ. ಅದನ್ನು ಮಂಜೂರು ಮಾಡುವ ಅಥವಾ ತಿರಸ್ಕರಿಸಲು ಸಕ್ಷಮ ಪ್ರಾಧಿಕಾರಕ್ಕೆ ಅಧಿಕಾರವಿದೆ. ರಜೆ ಮಂಜೂರು ಆಗದೆ ಕರ್ತವ್ಯದಿಂದ ಗೈರುಹಾಜರಾದಲ್ಲಿ ಅದನ್ನು ಸದರಿ ನಿಯಮಾವಳಿಯ ೧೦೬-ಎ ನಿಯಮದಡಿ ವೇತನ ಭತ್ಯೆ ರಜೆ (LWA) ಎಂದು ಪರಿಗಣಿಸಿ ಶಿಸ್ತಿನ ಕ್ರಮ ಕೈಗೊಳ್ಳಲು ಮತ್ತು ೧೦೮ನೇ ನಿಯಮದೊಂದಿಗೆ ಓದಲಾದ ತಾ: ೧೪.೦೯.೨೦೦೧ ಸಂಖ್ಯೆ: ಸಿಆಸುಇ ೧೮ ಸೇವಿಇ ೨೦೦೧ರ ಸುತ್ತೋಲೆ ಪ್ರಕಾರ ಅಂತಹ ಗೈರುಹಾಜರಾದ ಅವಧಿಯು ೪ ತಿಂಗಳು ಮೀರಿದ್ದಲ್ಲಿ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ದಂಡನೆಯನ್ನು ೧೯೫೭ರ ಕೆಸಿಎಸ್'ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿದ ನಂತರ ವಿಧಿಸಬಹುದಾಗಿರುತ್ತದೆ.

೬) ತಾ: ೨೪.೦೨.೯೭ ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದರು ಎಂಬುದು ಅತ್ಯಂತ ವಿವಾದಿತ ಅಂಶವಾಗಿರುತ್ತದೆ. ಸಹಾಯಕ ಪ್ರಾಧ್ಯಾಪಕ ಹುದ್ದೆಯನ್ನು ಹೊಂದಿದ್ದ ಅವರು ಕರ್ತವ್ಯಕ್ಕೆ ಹಾಜರಾಗುವ ಪೂರ್ವದಲ್ಲಿ ಅನಧಿಕೃತ ಗೈರುಹಾಜರಿ ಅವಧಿಯ ಸಕ್ರಮತೆ ಮತ್ತು ಅವರ ಸ್ಥಳ ನಿಯುಕ್ತಿ ಆದೇಶವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ನಂತರ ಕಾರ್ಯಭಾರ ವಹಿಸಿಕೊಳ್ಳಬೇಕೆ ಹೊರತು ಸುದೀರ್ಘ ಅವಧಿಗೆ ನಿರಂತರವಾಗಿ ಸೇವೆಯಿಂದ ಅನಧಿಕೃತ ಗೈರುಹಾಜರಾಗಿ ಇದ್ದಕ್ಕಿದ್ದಂತೆಯೇ ಕರ್ತವ್ಯಕ್ಕೆ ಹಾಜರಾಗಿ ಕರ್ತವ್ಯ ವರದಿಯನ್ನು ನೀಡಿದಾಕ್ಷಣ ಅವರು ಕರ್ತವ್ಯನಿರತರಾಗಿದ್ದರು ಎಂದು ಪರಿಗಣಿಸುವಂತಿಲ್ಲ. ಈ ಹಿನ್ನೆಲೆಯಲ್ಲಿ ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ಸ್ಪಷ್ಟೀಕರಣ ಕೇಳಿರುವುದು ಸಮಂಜಸವಾಗಿದೆ. ಅನಧಿಕೃತ ಗೈರುಹಾಜರಿಯಿಂದ ಹಿಂತಿರುಗಿ ಸ್ಥಳ ನಿಯುಕ್ತಿ ಆದೇಶ ನೀಡುವಂತೆ ಅರ್ಜಿ ಸಲ್ಲಿಸಿದಾಕ್ಷಣ ಅದನ್ನು ಕರ್ತವ್ಯ ವರದಿಯೆಂದು ಪರಿಗಣಿಸಿ ಅವರು ನೇಮಕಾತಿ ನಿರೀಕ್ಷಣೆಯಲ್ಲಿದ್ದರು ಎಂದು ಪರಿಗಣಿಸಿ ಅಂತಹ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಕೆಸಿಎಸ್ಆರ್ಸ್ ೮(೧೫)(ಎಫ್) ನಿಯಮದಡಿ ಪರಿಗಣಿಸತಕ್ಕದಲ್ಲ. ಯಾವುದೇ ಅಧಿಕಾರಿಯನ್ನು ಒಂದು ಹುದ್ದೆಯಿಂದ ವರ್ಗಾಯಿಸಿ ಅವರಿಗೆ ಸ್ಥಳನಿಯುಕ್ತಿ ನೇಮಕಾತಿ ಆದೇಶ ನೀಡದೆ ಕೆಲವು ಕಾಲಾವಧಿನಂತರ ಸ್ಥಳ ನಿಯುಕ್ತಿ ನೇಮಕಾತಿ ಆದೇಶವನ್ನು ನೀಡಿದಲ್ಲಿ ಅಂತಹ ಮಧ್ಯಂತರ ಅವಧಿಯನ್ನು ಕಡ್ಡಾಯ ನಿರೀಕ್ಷಣಾವಧಿಯೆಂದು ಪರಿಗಣಿಸಬಹುದೇ ಹೊರತು ಅನಧಿಕೃತ ಗೈರುಹಾಜರಿಯಲ್ಲಿನ ನೌಕರರು ಇದ್ದಕ್ಕಿದ್ದಂತೆ ಕರ್ತವ್ಯಕ್ಕೆ ಹಿಂತಿರುಗಿ ಸ್ಥಳ ನಿಯುಕ್ತಿ ನೀಡುವಂತೆ ಒಂದು ಅರ್ಜಿ ಸಲ್ಲಿಸಿ ಮತ್ತೆ ಅನಧಿಕೃತವಾಗಿ ಗೈರುಹಾಜರಾದಲ್ಲಿ, ಅಂತಹ ಅವಧಿಯನ್ನು ಯಾವುದೇ ಕಾರಣಕ್ಕೂ ಕಡ್ಡಾಯ ನಿರೀಕ್ಷಣಾವಧಿಯೆಂದುಪರಿಗಣಿಸಲು ಆಸ್ಪದವಿರುವುದಿಲ್ಲ. ಅಲ್ಲದೆ ಆಪಾದಿತರಿಗೆ ತಾ: ೧೭.೦೩.೯೮ರ ಅಧಿಸೂಚನೆಯಲ್ಲಿ ಮೈಸೂರು ವೈದ್ಯಕೀಯ ಕಾಲೇಜಿನ ನೇತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಗೆ ನೇಮಿಸಲಾಗಿತ್ತು, ಅದರ ಪ್ರಕಾರ ಅವರು ಕಾರ್ಯಭಾರ ವಹಿಸಿಕೊಳ್ಳದೆ ಅನಧಿಕೃತವಾಗಿ ಗೈರುಹಾಜರಿಯಲ್ಲಿ ಮುಂದುವರಿದಿದ್ದರು. ತತ್ಫಲವಾಗಿ ತಾ: ೦೮.೧೨.೨೦೦೦ದ ಸರ್ಕಾರಿ ಆದೇಶದಲ್ಲಿ ವಿಧಿಸಲಾಗಿದ್ದ ೨ ವೇತನ ಮುಂಬಡ್ತಿಗಳನ್ನು ತಡೆಹಿಡಿಯುವ ದಂಡನೆಯು ಸಹ ಜಾರಿಗೊಳ್ಳದೆ ನಿಷ್ಫಲವಾಯಿತು. ಅವರು ತಾ: ೧೩.೧೧.೯೫ ರಿಂದ ಅನಧಿಕೃತವಾಗಿ ಕರ್ತವ್ಯದಿಂದ ಗೈರುಹಾಜರಾಗಿದ್ದರು ಎಂಬ ದೋಷಾರೋಪಣೆಯನ್ನು ಅವರು ಬೇಷರತ್ತಾಗಿ ಅಂಗೀಕರಿಸಿದ್ದರು. ಆದ್ದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಅಗತ್ಯವಿರಲಿಲ್ಲ. ಅದು ತೀವ್ರಸ್ವರೂಪದ ದುರ್ನಡತೆಯಾಗಿದ್ದರೂ ಅವರಿಗೆ ಮತ್ತೊಂದು ಅವಕಾಶ ನೀಡುವ ಸದುದ್ದೇಶದಿಂದ ೨ ಇಂಕ್ರಿಮೆಂಟ್‌ಗಳನ್ನು ತಡೆಹಿಡಿಯುವ ಲಘು ದಂಡನೆಯನ್ನು ವಿಧಿಸಲಾಗಿತ್ತು, ಮತ್ತು ಅವರಿಗೆ ಸ್ಥಳನಿಯುಕ್ತಿ ಆದೇಶವನ್ನು ಅವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿ ಇಟ್ಟು ತಾ: ೧೭.೦೩.೯೮ರ ಅಧಿಸೂಚನೆಯಲ್ಲಿ ನೀಡಲಾಗಿತ್ತು, ಆದಕಾರಣ ಅವರು ತಾ: ೧೩.೧೧.೯೫ ರಿಂದ ಸತತವಾಗಿ ಸೇವೆಯಿಂದ ಅನಧಿಕೃತ ಗೈರುಹಾಜರಾಗಿ ತೀವ್ರಸ್ವರೂಪದ ದುರ್ನಡತೆಯನ್ನು ಎಸಗಿದ್ದರು. ಅಂತಹ ಅವರ ಗೈರುಹಾಜರಿಯಿಂದಾಗಿ ಮೈಸೂರು ವೈದ್ಯಕೀಯ ಕಾಲೇಜಿನ ಶೈಕ್ಷಣಿಕ ಕಾರ್ಯಾಚರಣೆ ಮತ್ತು ಕ್ಲಿನಿಕಲ್ ಪ್ರಕಾರ್ಯದ ಮೇಲೆ ಅತ್ಯಂತ ತೀವ್ರವಾದ ಪ್ರತಿಕೂಲ ಪರಿಣಾಮ ಉಂಟಾಗಿತ್ತು, ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿದ್ದು ಅತ್ಯಧಿಕ ಜವಾಬ್ದಾರಿಯನ್ನು ಹೊಂದಿರುವ ಅಪಾದಿತರು ಹಲವಾರು ವರ್ಷಗಳು ಈ ರೀತಿ ಅನಧಿಕೃತವಾಗಿ ಗೈರುಹಾಜರಾದಲ್ಲಿ ವೈದ್ಯಕೀಯ ಕಾಲೇಜಿನ ಶೈಕ್ಷಣಿಕ ಕಾರ್ಯಾಚರಣೆಯ ಸ್ಥಿತಿಯು ಅತ್ಯಂತ ಘೋರವಾಗಿರುತ್ತದೆ.

೭) ಸ್ವ-ಇಚ್ಛಾ ನಿವೃತ್ತಿಗೆ ಸಂಬಂಧಿಸಿದಂತೇ ಕೆಸಿಎಸ್ಆರ್‌ನ ೨೮೫(೨)(ಟಿ)ನೇ ನಿಯಮದಡಿ ಸ್ವಇಚ್ಛಾ ನಿವೃತ್ತಿಗೆ ಸೂಚನೆ ನೀಡಿದಾಕ್ಷಣ ಅದು ಜಾರಿಗೆ ಬರತಕ್ಕದ್ದಲ್ಲ. ಅದನ್ನು ನೇಮಕಾತಿ ಪ್ರಾಧಿಕಾರವು ಅಂಗೀಕರಿಸಿದ್ದಲ್ಲಿ ಮಾತ್ರ ಜಾರಿಗೆ ಬರುತ್ತದೆ. ಅಲ್ಲದೆ ೨೮೫ (೨) (xi)(ಎ)ನಿಯಮದಡಿ ಯಾವುದೇ ಕಠಿಣ ದಂಡನೆ ವಿಧಿಸಬಹುದಾದಂತಹ ಶಿಸ್ತು ನಡವಳಿಯು ಬಾಕಿ ಇದ್ದಲ್ಲಿ ಅಥವಾ ಜರುಗಿಸುವ ಹಿನ್ನೆಲೆಯಲ್ಲಿ ಸ್ವಇಚ್ಛಾ ನಿವೃತ್ತಿಗೆ ಅನುಮತಿಸುವ ಅಥವಾ ನಿರಾಕರಿಸುವ ಹಕ್ಕು ಸರ್ಕಾರಕ್ಕೆ ನಿಹಿತವಾಗಿದೆ ಆದ್ದರಿಂದ ಪೂರ್ವಾನ್ವಯವಾಗಿ ಅಥವಾ ಭವಿಷ್ಯಾನುಸಾರವಾಗಿ ಆಪಾದಿತರಿಗೆ ಸ್ವಇಚ್ಛಾ ನಿವೃತ್ತರಾಗಲು ಅನುಮತಿ ನೀಡಲು ಕಿಂಚಿತ್ ಅವಕಾಶವಿರುವುದಿಲ್ಲ. ಅಲ್ಲದೆ ಈಗಾಗಲೇ ಕಳೆದ ೯ ವರ್ಷಗಳಿಗೂ ಮೀರಿ ಅನಧಿಕೃತ ಗೈರುಹಾಜರಿಯಲ್ಲಿರುವ ಅಪಾದಿತರಿಗೆ ಸ್ವಇಚ್ಛಾ ನಿವೃತ್ತಿಗೆ ಅನುಮತಿ ನೀಡುವ ಪ್ರಸಂಗ ಉದಯಿಸುವುದಿಲ್ಲ .

೮) ಮೇಲ್ಕಂಡ ಸನ್ನಿವೇಶದಲ್ಲಿ ೧೯೫೭ರ ಕೆಸಿಎಸ್ಆರ್(ಸಿಸಿಎ) ನಿಯಮಾವಳಿಯ ೮(viii)ನೇ ನಿಯಮದೊಂದಿಗೆ ಓದಲಾದ ಕೆಸಿಎಸ್ಆರ್ಸ್‌ನ ೧೦೮ನೇ ನಿಯಮ ಹಾಗೂ ತಾ: ೧೪.೦೯.೨೦೦೧ ಸಂಖ್ಯೆ: ಡಿಪಿಎಆರ್ ೧೮ ಎಸ್‌ಡಿಇ ೨೦೦೧ರ ಸುತ್ತೋಲೆಯ ಅನುಸಾರ ಆಪಾದಿತರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವುದು ಅತ್ಯಂತ ಸಮಂಜಸ ಮತ್ತು ಸಮರ್ಥನೀಯವಾಗಿದೆ.

**àPñÌË B¹óÙ àNV¦ BPôP 177 HNHNá 2003, ÄNYçöÊô, º¼ñNP: 10ನೇ ನವೆಂಬರ್ 2004**

೯) ೧೯೫೭ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ೮(viii)ನೇ ನಿಯಮದೊಂದಿಗೆ ಓದಲಾದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ೧೦೮ನೇ ನಿಯಮದಡಿ ಹಾಲಿ ಅನಧಿಕೃತ ಗೈರುಹಾಜರಿಯಲ್ಲಿರುವ ಮೈಸೂರು ವೈದ್ಯಕೀಯ ಕಾಲೇಜಿನ ನೇತ್ರಚಿಕಿತ್ಸಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಡಾ: ಮಹೇಶ್ ಐ ಮುಗ್ಗಂ ರವರ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲಾಗಿದೆ ಮತ್ತು ಅವರನ್ನು ಸೇವೆಯಿಂದ ವಜಾ ಮಾಡಲಾಗಿದೆ.

೧೦) ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ಅವರನ್ನು ತಕ್ಷಣ ಕರ್ತವ್ಯದಿಂದ ವಿಮುಕ್ತಗೊಳಿಸುವ ವಿದ್ಯುಕ್ತ ಆದೇಶವನ್ನು ಹೊರಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**Hàý.¼ñYÊñnô**

PR-1261

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು, ಹರಿಯಾಣ ನಗರಾಭಿವೃದ್ಧಿ ಪ್ರಾಧಿಕಾರ, ಗುರ್‌ಗಾಂವ್‌ನಲ್ಲಿ ಅಧ್ಯಯನ ನಡೆಸಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 16.11.2004 ರ ಪತ್ರ ಸಂಖ್ಯೆ: MUDA/Commr/PS/2004-05, ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು.

**ಪ್ರಸ್ತಾವನೆ:-**

ಮೇಲೆ ಓದಲಾದ ಪತ್ರದಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಹರಿಯಾಣ ನಗರಾಭಿವೃದ್ಧಿ ಪ್ರಾಧಿಕಾರ, ಗುರ್‌ಗಾಂವ್‌ನಲ್ಲಿ ಕೆಲವು ವಾಣಿಜ್ಯ ಮಳಿಗೆ, ಉದ್ಯಾನವನ, ರಸ್ತೆ, ಕ್ರೀಡಾಂಗಣ ಇವುಗಳನ್ನು ತನ್ನದೇ ಆದ ಮಾದರಿಯಲ್ಲಿ ಅಭಿವೃದ್ಧಿಪಡಿಸಿರುವುದರಿಂದ ಈ ಪ್ರಾಧಿಕಾರಕ್ಕೆ ಭೇಟಿ ನೀಡಿ ಈ ಬಗ್ಗೆ ವಿವರವಾದ ಅಧ್ಯಯನ ನಡೆಸಲು ದಿನಾಂಕ: 19 ಮತ್ತು 20 ನವೆಂಬರ್ 2004 ರಂದು ಹರಿಯಾಣ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹೋಗಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಈ ಬಗ್ಗೆ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 404 ಮೈಅಪ್ರಾ 2004, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2004**

ಶ್ರೀ ಪಂಕಜ್ ಕುಮಾರ್ ಪಾಂಡೆ ಭಾ.ಆ.ಸೇ. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ದಿನಾಂಕ: 19 ಮತ್ತು 20 ನವೆಂಬರ್ 2004 ರಂದು ಹರಿಯಾಣ ನಗರಾಭಿವೃದ್ಧಿ ಪ್ರಾಧಿಕಾರ, ಗುರ್‌ಗಾಂವ್‌ಗೆ ಭೇಟಿ ನೀಡಿ ಅಧ್ಯಯನ ನಡೆಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ. ಸದರಿ ಅಧಿಕಾರಿಗಳು ನಿಯಮಾನುಸಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರನ್ವಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1262

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಉಮಾತಾರ ಗ್ರಾಮದ ಸ.ನಂ. 193 ರಲ್ಲಿರುವ ಮೂಲ ಹೆಸರುಗಳನ್ನು ತೆಗೆದುಹಾಕಿ ಬೇರೆಯವರ ಹೆಸರಿಗೆ ಅಕ್ರಮವಾಗಿ ಖಾತೆ ಬದಲಾವಣೆ ಮಾಡಿರುವ ಬಗ್ಗೆ.

**ಓದಲಾಗಿದೆ:**
1) ವಿಧಾನಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಬಸವರಾಜ ಎಸ್. ಹೊರಟ್ಟಿ ಇವರ ದಿನಾಂಕ: 13.10.2004 ರ ಪತ್ರ.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 488 ಬಿಎಂಎಂ 2004, ದಿನಾಂಕ: 2.11.2004.

**ಪ್ರಸ್ತಾವನೆ:-**

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಕಂದಾಯ ನಿರೀಕ್ಷಕರಾದ ಶ್ರೀ ಬಿತಲವಾಯಿ ಮತ್ತು ಇದೇ ಹೋಬಳಿಯ ಉಮತಾರ ಗ್ರಾಮದ ಗ್ರಾಮಲೆಕ್ಕಿಗರಾದ ಶ್ರೀ ಹಿರೇಮಠ ಇವರು ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಉಮತಾರ ಗ್ರಾಮದ ಸ.ನಂ. 193 ರಲ್ಲಿರುವ 12-02 ಗುಂಟೆ ಜಮೀನಿನ ಬಗ್ಗೆ ದಿನಾಂಕ: 9.10.2004 ರಿಂದ 14.10.2004 ರ ಅವಧಿಯಲ್ಲಿ ಮೂರು ಬಾರಿ ಅಕ್ರಮ ಖಾತೆ ಬದಲಾವಣೆ ಮಾಡಿರುವುದಾಗಿ ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಸದರಿ ನೌಕರರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಅವರುಗಳನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ. ಅದರಂತೆಯೇ ಅದೇ ದಿನಾಂಕದ ಮತ್ತೊಂದು ಆದೇಶದಲ್ಲಿ ಈ ಪ್ರಕರಣವನ್ನು ಸಮಗ್ರವಾಗಿ ತನಿಖೆ ಮಾಡಲು ಬೆಳಗಾಂ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರು, ಬೈಲಹೊಂಗಲ ಉಪ ವಿಭಾಗಾಧಿಕಾರಿಗಳು ಹಾಗೂ ಕಂದಾಯ ಇಲಾಖೆಯ ವಿಶೇಷ ಕೋಶದ ಶಿರಸ್ತೇದಾರರಾದ ಶ್ರೀ ಎ. ಸುಬ್ರಮಣ್ಯಶಾಸ್ತ್ರಿ ಇವರುಗಳನ್ನೊಳಗೊಂಡ ತನಿಖಾ ದಳವನ್ನು ರಚಿಸಿ ಆದೇಶ ಹೊರಡಿಸಲಾಗಿದೆ.

ಸದರಿ ಪ್ರಕರಣದ ಬಗ್ಗೆ ಸರ್ಕಾರ ಕೂಲಂಕಷವಾಗಿ ತನಿಖೆ ಮಾಡಲು ನಿರ್ಧರಿಸಿದ್ದಾಗ್ಯೂ ಸದರಿ ಜಮೀನಿನ ಬಗ್ಗೆ ದಿನಾಂಕ: 10.11.2004 ರಂದು ರೆಕಾರ್ಡ್ ಆಫ್ ರೈಟ್ ಕಲಂ 12 ರಲ್ಲಿ ವ್ಯವಸಾಯಗಾರನ ಹೆಸರು ಶ್ರೀ ಮುಧೋಳ್ ಶಿವನವ್ವ ಕೋಂ ನಾಗಪ್ಪ ಮತ್ತು ಪೂಜಾರ್ ಸಿದ್ದವ್ವ ಕೋಂ ಕರಿಯಪ್ಪ ಎಂದು ಬದಲಾವಣೆ ಮಾಡಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆ. ಈ ಕ್ರಮವು ಸರ್ಕಾರ ಬಹಳ ಗಂಭೀರವಾಗಿ ಪರಿಶೀಲಿಸಿದೆ. ಸದರಿ ಜಮೀನಿನ ಖಾತೆ ಬದಲಾವಣೆಗೆ ಸಂಬಂಧಿಸಿದ ವಿಷಯ ಸರ್ಕಾರದಿಂದ ರಚಿಸಲಾದ ತನಿಖಾ ದಳ ವ್ಯಾಪ್ತಿಗೆ ಒಳಪಟ್ಟಿದ್ದಾಗ್ಯೂ ದಾಖಲೆಗಳಲ್ಲಿ ಪದೇ ಪದೇ ಖಾತೆ ಬದಲಾವಣೆ ಆಗುತ್ತಿರುವುದರಿಂದ ಮತ್ತು ಇನ್ನು ಮುಂದೆ ಯಾವುದೇ ಕಾರಣಕ್ಕೂ ಇಂತಹ ಕ್ರಮ ಪುನರಾವರ್ತನೆಯಾಗಬಾರದೆಂಬ ಉದ್ದೇಶದಿಂದ ಪ್ರಸ್ತುತ ಈ ಪ್ರಕರಣವನ್ನು ನಿರ್ವಹಿಸಿದ ಸಂಬಂಧಪಟ್ಟ ಶಿರಸ್ತೇದಾರರಾದ ಶ್ರೀ ನದಾಫ್, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರ ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 488 ಬಿಎಂಎಂ 2004, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ರಾಮದುರ್ಗ ತಾಲ್ಲೂಕು ಕಛೇರಿಯ ಶಿರಸ್ತೇದಾರರಾದ ಶ್ರೀ ನದಾಫ್ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಾಗೂ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡುವುದನ್ನು ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ. ಸದರಿಯವರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

2. ಶ್ರೀ ನದಾಫ್ ಇವರನ್ನು ಮೇಲಿನ ಆದೇಶದಿಂದಾಗಿ ತಕ್ಷಣ ಬಿಡುಗಡೆಗೊಳಿಸಿ ಆ ಹುದ್ದೆಯ ಪ್ರಭಾರವನ್ನು ಬೇರೆ ಸೂಕ್ತ ಶಿರಸ್ತೇದಾರರಿಗೆ ವಹಿಸುವ ಬಗ್ಗೆ ಜಿಲ್ಲಾಧಿಕಾರಿಗಳು ಅಗತ್ಯ ಕ್ರಮ ತೆಗೆದುಕೊಳ್ಳಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1263

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-1)

**ಒಳಾಡಳಿತ ಸಚಿವಾಲಯ**

**ವಿಷಯ:** ಕೋಲಾರ ಜಿಲ್ಲೆಯ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಒಂದು ಅಧೀಕ್ಷಕ ಹುದ್ದೆಯನ್ನು ಮಂಜೂರು ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್: ಸಿಶಾ/283: 91-92 ದಿನಾಂಕ: 29.4.2004.

**ಪ್ರಸ್ತಾವನೆ:-**

ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕ: 29.4.2004 ರ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳು, ಬೆಂಗಳೂರು ಇವರು ಈ ಕೆಳಕಂಡ 9 ಕಚೇರಿಗಳಿಗೆ ಅಧೀಕ್ಷಕರು ಹುದ್ದೆಗಳನ್ನು ಮಂಜೂರು ಮಾಡುವ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1. ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಗ್ರಾಮಾಂತರ
2. ಸರ್ಕಾರಿ ಅಭಿಯೋಜಕರ ಕಛೇರಿ, ಕೋಲಾರ
3. ಸರ್ಕಾರಿ ಅಭಿಯೋಜಕರ ಕಛೇರಿ, ಚಿತ್ರದುರ್ಗ
4. ಸರ್ಕಾರಿ ಅಭಿಯೋಜಕರ ಕಛೇರಿ, ಶಿವಮೊಗ್ಗ
5. ಸರ್ಕಾರಿ ಅಭಿಯೋಜಕರ ಕಛೇರಿ, ತುಮಕೂರು
6. ಸರ್ಕಾರಿ ಅಭಿಯೋಜಕರ ಕಛೇರಿ, ರಾಯಚೂರು
7. ಸರ್ಕಾರಿ ಅಭಿಯೋಜಕರ ಕಛೇರಿ, ಬಳ್ಳಾರಿ
8. ಸರ್ಕಾರಿ ಅಭಿಯೋಜಕರ ಕಛೇರಿ, ಮಂಡ್ಯ
9. ಸರ್ಕಾರಿ ಅಭಿಯೋಜಕರ ಕಛೇರಿ, ಹಾಸನ

2. ಮತ್ತು ಈ ಕೆಳಕಂಡ ಕಚೇರಿಗಳಿಗೆ ಶೀಘ್ರಲಿಪಿಗಾರರ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1. ಸರ್ಕಾರಿ ಅಭಿಯೋಜಕರ ಕಛೇರಿ, ಮೈಸೂರು
2. ಸರ್ಕಾರಿ ಅಭಿಯೋಜಕರ ಕಛೇರಿ, ಬೆಳಗಾಂ
3. ಸರ್ಕಾರಿ ಅಭಿಯೋಜಕರ ಕಛೇರಿ, ಧಾರವಾಡ
4. ಸರ್ಕಾರಿ ಅಭಿಯೋಜಕರ ಕಛೇರಿ, ಗುಲ್ಬರ್ಗಾ
5. ಸರ್ಕಾರಿ ಅಭಿಯೋಜಕರ ಕಛೇರಿ, ಬಿಜಾಪುರ
6. ಸರ್ಕಾರಿ ಅಭಿಯೋಜಕರ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ
7. ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ಗ್ರಾಮಾಂತರ

ಮೇಲೆ ನಮೂದಿಸಿರುವ 9 ಸರ್ಕಾರಿ ಅಭಿಯೋಜಕರ ಕಛೇರಿಗಳಲ್ಲಿ ಒಬ್ಬರಿಗಿಂತ ಹೆಚ್ಚಿನ ಸರ್ಕಾರಿ ಅಭಿಯೋಜಕರುಗಳು ಕಾರ್ಯನಿರ್ವಹಿಸುತ್ತಿದ್ದು, ಈ ಕಛೇರಿಗಳಿಗೆ ಅಧೀಕ್ಷಕರ ಹುದ್ದೆಗಳು ಮಂಜೂರಾಗಿರುವುದಿಲ್ಲ. ಈ ಕಛೇರಿಗಳಲ್ಲಿ ಹೆಚ್ಚಿನ ಕೆಲಸದ ಒತ್ತಡ ಇರುತ್ತದೆ. ಈ ಕಛೇರಿಗಳಲ್ಲಿ ಪ್ರಥಮ ದರ್ಜೆ ಸಹಾಯಕರು ಮಾತ್ರ ಕಾರ್ಯನಿರ್ವಹಿಸುತ್ತಿದ್ದು, ವ್ಯಾಜ್ಯಗಳ ಶಾಖೆ, ಲೆಕ್ಕಗಳ ಶಾಖೆ, ಸಿಬ್ಬಂದಿ ಶಾಖೆ, ಸಿವಿಲ್ ಶಾಖೆಗಳ ಕೆಲಸಗಳನ್ನು ನಿರ್ವಹಿಸುತ್ತಿದ್ದು, ಸಿಬ್ಬಂದಿಯವರ ಮೇಲ್ವಿಚಾರಣೆ ವಹಿಸಲು ಸಾಧ್ಯವಾಗುವುದಿಲ್ಲ. ಆದಕಾರಣ ಸದರಿ 9 ಸರ್ಕಾರಿ ಅಭಿಯೋಜಕರ ಕಛೇರಿಗಳಲ್ಲಿ ತಲಾ ಒಂದೊಂದು ಅಧೀಕ್ಷಕರ ಹುದ್ದೆಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಕಂಡಿಕೆ 1 ರಲ್ಲಿ ನಮೂದಿಸಿರುವ 9 ಜಿಲ್ಲೆಗಳಲ್ಲಿನ ಸರ್ಕಾರಿ ಅಭಿಯೋಜಕರ ಕಛೇರಿಗಳಲ್ಲಿ ಅಧೀಕ್ಷಕ ಹುದ್ದೆಯನ್ನು ಮತ್ತು ಕಂಡಿಕೆ 2 ರಲ್ಲಿ ನಮೂದಿಸಿರುವ 7 ಜಿಲ್ಲೆಗಳಲ್ಲಿ ಶೀಘ್ರಲಿಪಿಗಾರರ ಹುದ್ದೆಗಳನ್ನು ಸೃಜಿಸುವ ಬಗ್ಗೆ ಸಲ್ಲಿಸಲಾಗಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 04 ಪಿಪಿಇ 2004, (ಲಾ 104 ಪಿಪಿಇ 2004), ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಕೋಲಾರ ಜಿಲ್ಲೆಯ ಸರ್ಕಾರಿ ಅಭಿಯೋಜಕರ ಕಛೇರಿಗಳಲ್ಲಿ ಮಾತ್ರ ಒಂದು ಅಧೀಕ್ಷಕ ಹುದ್ದೆಯನ್ನು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸೃಜಿಸಲಾಗಿದೆ.

ಸದರಿ ಹುದ್ದೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ re-deployment Cell ನಲ್ಲಿ ಲಭ್ಯವಿರುವ ಹೆಚ್ಚಿನ ಮಾನವ ಶಕ್ತಿಯಿಂದ ಪ್ರತಿನಿಯೋಜನೆಯ ಷರತ್ತುಗಳ ಮೇರೆಗೆ ಭರ್ತಿ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಎಫ್‌ಡಿ 986 ಇಎಕ್ಸ್‌ಪಿ 7/04, ದಿನಾಂಕ: 20.10.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1264

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಅಭಿಯೋಗಗಳು)

**ENERGY SECRETARIAT**

**Sub:** Enhancement of Wind Power capacity from 15 MW to 19.6 MW in favour of M/s. Enercon Wind Farms (India) Limited - orders relating to.

**Read:** 1. Government Order No. DE 133 NCE 97(1) dated 20.4.98.
2. Letter No. KRED/08/EWIL/04/1956 dated 30.10.2004/2.11.2004 of the Managing Director, KREDL, Bangalore.

**PREAMBLE:**

In the Government Order dated 20.4.98 read at (1) above, sanction was accorded to implement 15 MW Wind Power Project at Jogimatti range of Chitradurga District to M/s. Enercon Wind Farms (India) Limited.

2. Now, the Managing Director, Karnataka Renewable Energy Development Limited in his letter read at (2) above, has recommended to enhance the said allotted Wind Power Capacity from 15 MW to 19.6 M.W. in favour of M/s. Enercon Wind Farms (India) Limited. Hence, the following order.

**Government Order No. EN 364 NCE 2004, Bangalore, Dated 12th November 2004**

In the circumstances explained in the preamble and after careful consideration Government are pleased to enhance the Wind Power Capacity in favour of M/s. Enercon Wind Farms (India) Limited from 15 MW to 19.6 MW at Jogimatti-Wind Zone of Chitradurga District as detailed below:-

| Initially alloted capacity (MW) | Capacity proposed for enhancement including the sanctioned capacity (MW) | Geographical details of the area subjecting for enhancement of Wind Power Capacity |
|---|---|---|
| 15 MW | 19.6 MW | A part area of 15 MW Wind Power Project identified as a North South oriented ridge located on the South West of Bharampura village with peaks 903,961 and 886m elevation and is bounded in the geographical coordinates mentioned as below.<br>Latitude: 4 18' 47" - 14 18' 50 N<br>Longitude: 76 29' 43" - 76 29' E<br>Elevations: 903, 961 and 886 m |

The other terms and conditions of the Government order dated 20.4.1998 read at (1) above shall continue.

By Order and in the Name of the Governor of Karnataka,

**K.L. Jayaram**

PR-1265

Under Secretary to Government, Energy Department.

**ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ**

**ವಿಷಯ:** ವಿಜ್ಞಾನೇಶ್ವರ ಸ್ಮಾರಕ ಮಂದಿರ, ಮರ್ತೂರು, ಗುಲ್ಬರ್ಗಾ ಜಿಲ್ಲೆ ಇದಕ್ಕೆ ಹಣಕಾಸಿನ ಸಹಾಯ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 36 ಕೆಎಂಯು 2004, ದಿನಾಂಕ: 3.3.2004.

2) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಕಸನಿ 5 ಸ್ಮಾರಕ 2004-05 ದಿ: 7.8.2004.

**ಪ್ರಸ್ತಾವನೆ:-**

ಮೇಲೆ ಉಲ್ಲೇಖ (2) ರಲ್ಲಿ ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು, ಬೆಂಗಳೂರು, ಇವರು, ಗುಲ್ಬರ್ಗಾ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಇವರು, ವಿಜ್ಞಾನೇಶ್ವರ ಸೌಹಾರ್ದ ಸಹಕಾರಿ (ನಿ), ಎಂಬ ಸಂಸ್ಥೆ, ವಿಜ್ಞಾನೇಶ್ವರ ಅವರ ಹೆಸರಿನಲ್ಲಿ ಮರ್ತೂರು ಗ್ರಾಮದಲ್ಲಿ "ವಿಜ್ಞಾನೇಶ್ವರ ಸ್ಮಾರಕ ಮಂದಿರವನ್ನು ರೂ. 75/- ಲಕ್ಷಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಯೋಜನೆ ಸಿದ್ಧಪಡಿಸಿ, ಈ ಪೈಕಿ ರೂ. 12/- ಲಕ್ಷಗಳನ್ನು ಈಗಾಗಲೇ ವೆಚ್ಚ ಮಾಡಿರುವುದಾಗಿ ಹಾಗೂ ಸ್ಥಳೀಯವಾಗಿ ರೂ. 40/- ಲಕ್ಷಗಳ ವಂತಿಗೆಯನ್ನು ಸದರಿ ಸಂಸ್ಥೆ ಸಂಗ್ರಹಿಸಿರುವುದಾಗಿ, ವರದಿ ಮಾಡಿರುವುದಾಗಿ ತಿಳಿಸುತ್ತಾ, ಸದರಿ ಯೋಜನೆಗೆ, ಸದರಿ ಸಂಸ್ಥೆಗೆ ಜಿಲ್ಲಾಧಿಕಾರಿಗಳ ಶಿಫಾರಸ್ಸು ಪ್ರಕಾರ ರೂ. 10/- ಲಕ್ಷಗಳನ್ನು ಸರ್ಕಾರದಿಂದ ಮಂಜೂರು ಮಾಡಿ, ಲೆಕ್ಕಶೀರ್ಷಿಕೆ 4202-04-800-1-02-139 ಪ್ರಧಾನ ಕಾಮಗಾರಿಗಳು (ಸ್ಮಾರಕ) ಅಡಿಯಲ್ಲಿ ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಉಲ್ಲೇಖ (1) ರಲ್ಲಿ ಓದಲಾದ ಆದೇಶದಲ್ಲಿ ವಿಜ್ಞಾನೇಶ್ವರ ಸೌಹಾರ್ದ ಸಹಕಾರಿ (ಲಿ) ಗುಲ್ಬರ್ಗಾ ಇವರು ಸ್ಥಾಪಿಸುವ ವಿಜ್ಞಾನೇಶ್ವರ ಸ್ಮಾರಕ ಕೇಂದ್ರಕ್ಕೆ ರೂ. 1.00 ಲಕ್ಷವನ್ನು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶಕರಿಗೆ ಮಂಜೂರಾತಿ ನೀಡಿ ಲೆಕ್ಕಶೀರ್ಷಿಕೆ 2205-00-103-0-02 (ಯೋಜನೇತರ) 059 ಇತರೆ ಖರ್ಚು ಅಡಿಯಲ್ಲಿ ಬಿಡುಗಡೆ ಮಾಡಿ ಆದೇಶವನ್ನು ಈಗಾಗಲೇ ಹೊರಡಿಸಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 155 ಕೆಎಂಯು 2004, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಜ್ಞಾನೇಶ್ವರ ಸೌಹಾರ್ದ ಸಹಕಾರಿ (ನಿ) ಗುಲ್ಬರ್ಗಾ ಇವರು, ಮರ್ತೂರು ಗ್ರಾಮದಲ್ಲಿ ನಿರ್ಮಿಸಲಿರುವ ವಿಜ್ಞಾನೇಶ್ವರ ಸ್ಮಾರಕ ಮಂದಿರಕ್ಕೆ ಉಲ್ಲೇಖ (1) ರಲ್ಲಿ ಈಗಾಗಲೇ ಬಿಡುಗಡೆ ಮಾಡಿರುವ ರೂ. 1.00 ಲಕ್ಷಗಳ ಜೊತೆಗೆ ಲಭ್ಯವಿರುವ ಅನುದಾನದಲ್ಲಿ ರೂ. 9,00,000/- ಲಕ್ಷಗಳನ್ನು (ಒಂಭತ್ತು ಲಕ್ಷ ರೂಪಾಯಿಗಳು ಮಾತ್ರ) ಹೆಚ್ಚುವರಿ ಅನುದಾನವಾಗಿ ಮಂಜೂರು ಮಾಡಿ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ, ನಿರ್ದೇಶಕರಿಗೆ ಬಿಡುಗಡೆ ಮಾಡಲಾಗಿದೆ.

ಸದರಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-01-059 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು, ಹಾಗೂ ಒಂದು ವೇಳೆ ಲಭ್ಯವಿರುವ ಅನುದಾನದಲ್ಲಿ ಕೊರತೆ ಬೀಳುವುದಾದಲ್ಲಿ ರೂ. 9.00 ಲಕ್ಷಗಳನ್ನು ಹೆಚ್ಚುವರಿ ಅನುದಾನವಾಗಿ ಬಿಡುಗಡೆ ಮಾಡಲು ಹಾಗೂ ಇದನ್ನು 2004-05ನೇ ಸಾಲಿನ ಪೂರಕ ಅಂದಾಜುಗಳ 2ನೇ ಕಂತಿನಲ್ಲಿ ಸೇರಿಸಿ ಸಕ್ರಮಗೊಳಿಸಲು ಸೂಕ್ತ ಸಮಯದಲ್ಲಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಕಳುಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1621 ವೆಚ್ಚ-5/2004 ದಿನಾಂಕ: 5.10.2004 ರಲ್ಲಿ ನೀಡಿದ ಸಹಮತಿ ಮೇರೆಗೆ ಹಾಗೂ ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1271

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ:** ರಾಮನಗರ ತಾಲ್ಲೂಕು ಪಿಕಾರ್ಡ್ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸ.ಸಂ. ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ಪತ್ರ ಸಂಖ್ಯೆ: ಎಲ್‌ಡಿಬಿ-2/36/ಆಮರ/2003-04, ದಿನಾಂಕ: 20.01.2004.

**ಪ್ರಸ್ತಾವನೆ:-**

ರಾಮನಗರ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ರಾಮನಗರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಬ್ಯಾಂಕಿನ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 30(1) ರಡಿ ದಿನಾಂಕ: 16.10.2002 ರ ಬೆಂಗಳೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರ ಆದೇಶ ಸಂಖ್ಯೆ: ಜೆಆರ್‌ಬಿ/ಎಸ್‌ಎಸ್‌ಎನ್/01/ಎಸ್‌ಎಂಸಿ/2000-01 ರನ್ವಯ ರದ್ದುಪಡಿಸಲಾಗಿದ್ದು, ಜಿಲ್ಲಾ ವ್ಯವಸ್ಥಾಪಕರು, ಕಾಸ್ಕಾರ್ಡ್ ಬ್ಯಾಂಕ್ ಶಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ಆಡಳಿತಗಾರರನ್ನಾಗಿ ನೇಮಕ ಮಾಡಿದ್ದು, ಸದರಿ ಆಡಳಿತಗಾರರ ಅವಧಿಯನ್ನು ದಿನಾಂಕ: 21.7.2003 ರ ಸರ್ಕಾರದ ಪತ್ರ ಸಂಖ್ಯೆ: ಸಿಎಂಡಬ್ಲ್ಯೂ 93 ಸಿಎಲ್‌ಎಂ 2003 ರ ಪ್ರಕಾರ ಮತ್ತೆ ಆರು ತಿಂಗಳವರೆಗೆ ಅಂದರೆ ದಿನಾಂಕ: 15.10.2003 ರವರೆಗೆ ವಿಸ್ತರಿಸಲಾಗಿರುತ್ತದೆ.

ಈ ಬ್ಯಾಂಕಿಗೆ ದಿನಾಂಕ: 16.11.2003 ರಂದು ಚುನಾವಣೆ ನಡೆಸಲು ವೇಳಾಪಟ್ಟಿಯನ್ನು ಪ್ರಕಟಿಸಲಾಗಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಚುನಾವಣಾ ಪ್ರಕ್ರಿಯೆಗೆ ತಡೆಯಾಜ್ಞೆ ನೀಡಿರುವ ಹಿನ್ನೆಲೆಯಲ್ಲಿ ನಿಗದಿಪಡಿಸಿದ ದಿನಾಂಕದಂದು ಚುನಾವಣೆ ನಡೆಸಲಾಗಲಿಲ್ಲವೆಂದು ತಿಳಿಸಿ, ಆಡಳಿತ ಮಂಡಳಿಯನ್ನು ಪುನರ್ ರಚಿಸುವವರೆಗೂ ಆಡಳಿತಗಾರರ ಅವಧಿಯನ್ನು ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಕೋರಿದ್ದಾರೆ.

ಸಹಕಾರ ಸಂಘಗಳ ನಿಬಂಧಕರು ಮೇಲೆ ತಿಳಿಸಿರುವ ಕಾರಣಗಳ ಹಿನ್ನೆಲೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 99 ಸಿಎಲ್‌ಎಂ 2004, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ರಡಿ ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ರಾಮನಗರ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ರಾಮನಗರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇದಕ್ಕೆ ಅನ್ವಯವಾಗತಕ್ಕದ್ದೆಂದು ಸದರಿ ಅವಧಿಯೊಳಗೆ ನ್ಯಾಯಾಲಯದ ತಡೆಯಾಜ್ಞೆಯನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳತಕ್ಕದೆಂದೂ ನಿರ್ದೇಶಿಸುತ್ತದೆ, ಎಂದರೆ,

**30ರ ಪ್ರಕರಣದಲ್ಲಿ:**

(1)ನೇ ಉಪಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಎರಡು ವರ್ಷ" ಎಂಬುದಾಗಿ ಸೇರಿಸತಕ್ಕದ್ದು.

**ಸೂಚನೆ:**

30(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 31.12.2004 ರವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 30(1) ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1272

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಮೈಸೂರು ಲೋಕೋಪಯೋಗಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಚಾಮುಂಡೇಶ್ವರಿ ಮತ್ತು ಟಿ. ನರಸೀಪುರ ವಿಧಾನಸಭಾ ಕ್ಷೇತ್ರಕ್ಕೆ ಸೇರಿದ 8 ಹಳ್ಳಿ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**

1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಂಕದ: ರಸ್ತೆ ಶಾಖೆ: ಎಇ-1:ವಿಆರ್ ಮತ್ತು ಇ.ಜಿ.ಮು.ರ: ಮೇಲ್ದರ್ಜೆಗೇರಿಸು: ಮೈಸೂರು ವಿಭಾಗ: 2004-05, ದಿನಾಂಕ: 16.8.2004.

2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ಎಇ-1: ಮೈಸೂರು ವಿ.ಆರ್. ರಸ್ತೆ: ಜಿ.ಮು.ರ: ಮೇಲ್ದರ್ಜೆಗೇರಿಸುವ ಬಗ್ಗೆ: 2004-05, ದಿನಾಂಕ: 18.8.2004.

**ಪ್ರಸ್ತಾವನೆ:-**

ಮೇಲೆ ಓದಲಾದ (1) ಮತ್ತು (2)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮೈಸೂರು ಲೋಕೋಪಯೋಗಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಚಾಮುಂಡೇಶ್ವರಿ ಮತ್ತು ಟಿ. ನರಸೀಪುರ ವಿಧಾನಸಭಾ ಕ್ಷೇತ್ರಕ್ಕೆ ಸೇರಿದ ಈ ಕೆಳಗಿನ 8 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

| ಕ್ರ. ಸಂ. | ತಾಲ್ಲೂಕು | ವಿಧಾನಸಭಾ ಕ್ಷೇತ್ರ | ಮೇಲ್ದರ್ಜೆಗೇರಿಸುವ ರಸ್ತೆಯ ಹೆಸರು | ಪ್ರಸ್ತಾಪಿತ ರಸ್ತೆ ಉದ್ದ | ಹಾಲಿ ರಸ್ತೆಯ ವರ್ಗ |
|---|---|---|---|---|---|
| 1 | ಮೈಸೂರು | ಚಾಮುಂಡೇಶ್ವರಿ | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 212 ಸರಪಳಿ 222.80 ಕಿಮೀ ನಿಂದ (ಮೇಗಳಾಪುರದ ಬಳಿ) ಹೊಸಹಳ್ಳಿ-ಸಿದ್ದರಾಮನಹುಂಡಿ-ಯಡಹಳ್ಳಿ ಮಾರ್ಗವಾಗಿ ವರಣಾ-ಹೊಸಕೋಟೆ-ರಸ್ತೆಗೆ ಸೇರಿರುವ ರಸ್ತೆ | 7.50 ಕಿಮೀ | ಇತರೆ ಜಿಲ್ಲಾ ಮುಖ್ಯ ರಸ್ತೆ |
| 2 | ಮೈಸೂರು | ಚಾಮುಂಡೇಶ್ವರಿ | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 212ರ ಸರಪಳಿ 230.40 ಕಿಮೀ ನಿಂದ ಕುಪ್ಪೇಗಾಲ ಮಾರ್ಗವಾಗಿ ಟಿ. ನರಸೀಪುರ ರಸ್ತೆಗೆ ಸೇರುವ ರಸ್ತೆ | 13.40 ಕಿಮೀ | ಹಳ್ಳಿ ರಸ್ತೆ |

| ಕ್ರ. ಸಂ. | ತಾಲ್ಲೂಕು | ವಿಧಾನಸಭಾ ಕ್ಷೇತ್ರ | ಮೇಲ್ದರ್ಜೆಗೇರಿಸುವ ರಸ್ತೆಯ ಹೆಸರು | ಪ್ರಸ್ತಾಪಿತ ರಸ್ತೆ ಉದ್ದ | ಹಾಲಿ ರಸ್ತೆಯ ವರ್ಗ |
|---|---|---|---|---|---|
| 3 | ಮೈಸೂರು | ಚಾಮುಂಡೇಶ್ವರಿ | ಕುಪ್ಪೇಗಾಲದಿಂದ-ಸಿದ್ದರಾಮನಹುಂಡಿ-ರಂಗನಾಥಪುರ -ವಡೇರಕಟ್ಟೆಹಳ್ಳಿ-ಮಾರ್ಗವಾಗಿ ವರುಣಾ - ಹೊಸಕೋಟೆ ರಸ್ತೆಯನ್ನು ಸೇರುವ ರಸ್ತೆ | 6.00 ಕಿಮೀ | ಹಳ್ಳಿ ರಸ್ತೆ |
| 4 | ಮೈಸೂರು | ಚಾಮುಂಡೇಶ್ವರಿ | ಬೆಂಗಳೂರು-ಮೈಸೂರು ರಸ್ತೆಯಿಂದ (ಕನಕಪುರ ಮಾರ್ಗ) ರಮ್ಮನಹಳ್ಳಿ ಹಂಚ್ಯ-ಕೆಸರೆ-ಕಾಮನಕೆರೆ ಹುಂಡಿ ಕೆ.ಆರ್. ಮಿಲ್ ಮಾರ್ಗವಾಗಿ ಬೆಂಗಳೂರು -ಬಂಡೀಪುರ ರಸ್ತೆಯನ್ನು ಸೇರುವ ರಸ್ತೆ | 11.60 ಕಿಮೀ | ಇತರೆ ಜಿಲ್ಲಾ ರಸ್ತೆ |
| 5 | ಮೈಸೂರು | ಚಾಮುಂಡೇಶ್ವರಿ | ಎಂ.ಬಿ.ಜೆ. ರಸ್ತೆಯಿಂದ ಮಾದಹಳ್ಳಿ-ಅನಗಳ್ಳಿ-ಗೋಪಾಲಪುರ-ಮಾರ್ಗವಾಗಿ ಮೈಸೂರು-ಮಾನಂದವಾಡಿ ರಸ್ತೆಯನ್ನು ಸೇರುವ ರಸ್ತೆ | 9.50 ಕಿಮೀ | ಹಳ್ಳಿ ರಸ್ತೆ |
| 6 | ಮೈಸೂರು ಮತ್ತು ನಂಜನಗೂಡು | ಚಾಮುಂಡೇಶ್ವರಿ ಮತ್ತು ಟಿ. ನರಸೀಪುರ | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 212 ಸರಪಳಿ 220.40 ಕಿಮೀನಿಂದ ವರುಣಾ-ಹೊಸಕೋಟೆ-ಮಾರ್ಗವಾಗಿ ಹದಿನಾರು ಬಿಳಿಗೆರೆ-ಸುತ್ತೂರು ರಸ್ತೆಗೆ ಸೇರುವ ರಸ್ತೆ | 13.00 ಕಿಮೀ | ಇತರೆ ಜಿಲ್ಲಾ ರಸ್ತೆ |
| 7 | ನಂಜನಗೂಡು | ಟಿ. ನರಸೀಪುರ | ನಂಜನಗೂಡು ಟಿ. ನರಸೀಪುರ ರಸ್ತೆಯ 12ನೇ ಕಿಮೀ ನಿಂದ ರೆಸಿಡೆನ್ಸಿ ಶಾಲೆ-ಕಾಡ ಮಠ-ಮಾರ್ಗವಾಗಿ ಹದಿನಾರು ಸುತ್ತೂರು ಬಿಳಿಗೆರೆ ರಸ್ತೆಗೆ ಸೇರುವ ರಸ್ತೆ | 4.00 ಕಿಮೀ | ಹಳ್ಳಿ ರಸ್ತೆ |
| 8 | ಮೈಸೂರು ಮತ್ತು ಟಿ.ನರಸೀಪುರ | ಚಾಮುಂಡೇಶ್ವರಿ 0.00 ರಿಂದ 2.25 ಕಿಮೀ ಟಿ. ನರಸೀಪುರ 2.25 ರಿಂದ 6.25 ಕಿಮೀ | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 212 ಸರಪಳಿ 228.75 ಕಿಮೀ ನಿಂದ ಮಾದವಗೆರೆ ಕುಪ್ಯ ಮಾರ್ಗವಾಗಿ ಗರ್ಗೇಶ್ವರಿ ರಂಗಸಮುದ್ರ ರಸ್ತೆಯ 7.00 ನೇ ಕಿಮೀ. ವರೆಗೆ ಸೇರುವ ರಸ್ತೆ | 6.25 ಕಿಮೀ | ಹಳ್ಳಿ ರಸ್ತೆ |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 83 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಲಾಗಿ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಲಾದ ಒಟ್ಟು 71.25 ಕಿಮೀ. ಉದ್ದದ 8 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಲೋಇ:972 ಅಕೋ-1:2004, ದಿನಾಂಕ: 3.11.2004 ರಂದು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1274

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

**ತಿದ್ದುಪಡಿ**

**ಸಂಖ್ಯೆ: ಲೋಇ 89 ಪಿಡಬ್ಲ್ಯೂಸಿ 2002, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2004**

ಸರ್ಕಾರದ ಆದೇಶ ಸಂಖ್ಯೆ: ಲೋಇ 89 ಪಿಡಬ್ಲ್ಯೂಸಿ 2002, ದಿನಾಂಕ: 17.5.2003ರ ಆದೇಶ ಭಾಗದಲ್ಲಿ ಶ್ರೀ ಡಿ. ಶಿವರಾಮಯ್ಯ, ಪದವೀಧರ ಇಂಜಿನಿಯರ್ ರವರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ "ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ಪರಿಗಣಿಸುವುದು" ಎಂಬುದರ ಬದಲಾಗಿ "ಸದರಿ ನೌಕರರು ಸತತ 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿದ ದಿನಾಂಕದಿಂದಲೇ ಆರ್ಥಿಕ (ಕಾಲ್ಪನಿಕವಾಗಿ) ಹಾಗೂ ಸೇವಾ ಹಿರಿತನ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುತ್ತಾರೆ. ಆ ದಿನಾಂಕದಿಂದ ಅವರಿಗೆ ಸೇವಾ ಹಿರಿತನ ಹಾಗೂ ಇವರ ವೇತನವನ್ನು ಆ ದಿನದಿಂದಲೇ notional ಆಗಿ ನಿಗದಿಪಡಿಸುವುದು (without any arrears of pay- ಯಾವುದೇ ಹಿಂದಿನ ಬಾಕಿ ವೇತನಕ್ಕೆ ಅರ್ಹರಲ್ಲ)" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1275

**ಎಸ್. ಚಂದ್ರಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು ಸಿ).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಶ್ರೀ ಬಿ. ದೇವರಾಜು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಬೆಳಗಾಂ ಇವರ ಮೇಲಿನ ಆರೋಪಗಳಿಂದ ಅವರನ್ನು ದೋಷಮುಕ್ತಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:**

1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾಂ ಇವರ ಪತ್ರ ಸಂಖ್ಯೆ: ಜಿಪಂಬೆ: ಸಿಬ್ಬಂದಿ: ವಿವ-174: 2003-04, ದಿ: 11.6.2004.
2) ಶ್ರೀ ಬಿ. ದೇವರಾಜು, ಇವರಿಗೆ ಜಾರಿಗೊಳಿಸಿರುವ ಕಾರಣ ಕೇಳುವ ನೋಟಿಸ್ ಸಂಖ್ಯೆ: ಗ್ರಾಅಪ 162 ಸೇಶಿಕಾ 2002, ದಿ: 5.8.2004.
3) ಶ್ರೀ ಬಿ. ದೇವರಾಜು, ಇವರ ದಿ: 4.9.2004ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:-**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾಂ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಶ್ರೀ ಬಿ. ದೇವರಾಜು, ಕಾರ್ಯಪಾಲಕ ಇಂಜಿನಿಯರ್, ಇವರು ಬೆಳಗಾಂ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಗ್ರಾಮೀಣ ನೀರು ಸರಬರಾಜು ಯೋಜನೆಗೆ ಬಿಡುಗಡೆಯಾದ ಅನುದಾನವನ್ನು ಸಂಪೂರ್ಣವಾಗಿ ಬಳಸದೇ ರೂ. 74.188 ಲಕ್ಷದಷ್ಟು ಮೊತ್ತವನ್ನು ಬೇರೆ ಉದ್ದೇಶಕ್ಕಾಗಿ ಬಳಸಿ ಕರ್ತವ್ಯ ಲೋಪವೆಸಗಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಕರಡು ಆರೋಪ ಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಬಿ. ದೇವರಾಜ್ ಇವರ ಮೇಲೆ ಕಸಸೇ (ವನಿಅ) ನಿಯಮ 1957ರ ನಿಯಮ 11 ರಂತೆ ಇಲಾಖಾ ವಿಚಾರಣೆಯನ್ನು ಹೂಡಲು ನಿರ್ಧರಿಸಿ ಅವರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪಪಟ್ಟಿ ಜಾರಿಗೊಳಿಸಲಾಗಿತ್ತು. ಸದರಿ ಕಾರಣ ಕೇಳುವ ನೋಟಿಸ್‌ಗೆ ಆಪಾದಿತ ಅಧಿಕಾರಿಯು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಆಪಾದಿತ ಅಧಿಕಾರಿಯು ರೂ. 74.188 ಲಕ್ಷ ಮೊತ್ತವನ್ನು ಬೇರೆ ಉದ್ದೇಶಕ್ಕೆ ಬಳಸಿರುವರೇ ಎಂಬ ಬಗ್ಗೆ ಪರಿಶೀಲಿಸಲಾಗಿ ಆಪಾದಿತ ಅಧಿಕಾರಿ ಬೆಳಗಾಂ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಕಾರ್ಯಪಾಲಕ ಇಂಜಿನಿಯರ್‌ರಾಗಿ ಕರ್ತವ್ಯಕ್ಕೆ ಹಾಜರಾಗುವ ಪೂರ್ವದಲ್ಲೇ 39.04 ಲಕ್ಷ ರೂ.ಗಳನ್ನು ಅವರ ಹಿಂದಿನ ಅಧಿಕಾರಿಗಳು ಬೇರೆ ಉದ್ದೇಶಕ್ಕೆ ಖರ್ಚು ಮಾಡಿರುವುದು ಕಂಡುಬರುತ್ತದೆ. ಇನ್ನುಳಿದ ಮೊತ್ತದ ಪೈಕಿ ಸುಮಾರು 33.77 ಲಕ್ಷಗಳನ್ನು ದಿನಗೂಲಿ ನೌಕರರ ವೇತನಕ್ಕೆ ಬಳಸಿರುವುದು ಕಂಡುಬರುತ್ತದೆ. ದಿನಗೂಲಿ ನೌಕರರ ವೇತನ ಪಾವತಿ ಅನಿವಾರ್ಯದ ಪಾವತಿ ಆಗಿರುತ್ತದೆ. ಆದುದರಿಂದ ವಾಸ್ತವಿಕವಾಗಿ ದುರುದ್ದೇಶದಿಂದ ಇವರು ಯಾವುದೇ ಲೋಪ ಎಸಗಿರುವುದು ಕಂಡುಬರುವುದಿಲ್ಲ. ಈ ಕಾರಣದಿಂದಾಗಿ ವಾಸ್ತವಿಕವಾಗಿ ಎಲ್.ಓ.ಸಿ. ಹಂಚಿಕೆಯಲ್ಲಿ ಕಡಿತ ಉಂಟಾದ್ದರಿಂದ ಹಾಗೂ ದಿನಗೂಲಿ ನೌಕರರ ವೇತನ ಪಾವತಿ ಅನಿವಾರ್ಯ ಕಾರಣದಿಂದಾಗಿ ಈ ವಿಷಯದಲ್ಲಿ ಆರೋಪಿ ಅಧಿಕಾರಿಯನ್ನು ತಪ್ಪುದಾರರನ್ನಾಗಿ ಮಾಡುವುದು ಸರಿಯಾದುದಲ್ಲ ಹಾಗೂ ಅವರು ಯಾವುದೇ ಹಣಕಾಸಿನ ಅವ್ಯವಹಾರ ಎಸಗಿರುವುದು ಕಂಡುಬರುವುದಿಲ್ಲ. ಆದ್ದರಿಂದ ಸರ್ಕಾರವು ಅವರನ್ನು ಈ ಆರೋಪಕ್ಕೆ ಜವಾಬ್ದಾರರನ್ನಾಗಿ ಮಾಡುವುದು ಸರಿಯಲ್ಲವೆಂದು ನಿರ್ಣಯಿಸಿ ಅವರನ್ನು ಅವರ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 162 ಸೇಶಿಕಾ 2004, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಿ. ದೇವರಾಜು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರ್ ವಿಭಾಗ, ಬೆಳಗಾಂ (ಹಾಲಿ ಕಾರ್ಯಪಾಲಕ ಇಂಜಿನಿಯರ್, ನಂ. 1ನೇ ವಿಭಾಗ, ರೇಷ್ಮೆ ಇಲಾಖೆ, ಇಂಜಿನಿಯರಿಂಗ್ ಸೆಲ್ ವಾಟಾಳ್ ನಾಗರಾಜ್ ರಸ್ತೆ, ಓಕಳಿಪುರಂ, ಬೆಂಗಳೂರು) ಇವರು ಬೆಳಗಾಂ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಅನುದಾನ ಮಾರ್ಗಪಲ್ಲಟ ಮಾಡಿದ್ದರೆಂಬ ಆರೋಪ ಸಾಬೀತಾಗದಿರುವುದರಿಂದ ಇವರ ಮೇಲಿನ ಆಪಾದನೆಗಳನ್ನು ಕೈಬಿಟ್ಟು ಅವರನ್ನು ದೋಷಮುಕ್ತರನ್ನಾಗಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1276

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಶಿರಾದಲ್ಲಿ ಸಿವಿಲ್ ಜಡ್ಜ್ (ಹಿ.ವಿ) ನ್ಯಾಯಾಲಯವನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಇವರ ಪತ್ರ ಸಂಖ್ಯೆ: ಜಿಓಬಿ 11:109:04, ದಿನಾಂಕ: 15.3.2004.

**ಪ್ರಸ್ತಾವನೆ:-**

ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಮೇಲೆ ಓದಲಾದ ದಿನಾಂಕ: 15.3.2004 ರ ಪತ್ರದಲ್ಲಿ ರಾಜ್ಯದಲ್ಲಿ ಕೆಲವು ಸಿವಿಲ್ ಜಡ್ಜ್ (ಹಿ.ವಿ) : ಅಪರ ಸಿವಿಲ್ ಜಡ್ಜ್ (ಹಿ.ವಿ) ನ್ಯಾಯಾಲಯಗಳನ್ನು ಸ್ಥಾಪಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರತಿಯೊಂದು ನ್ಯಾಯಾಲಯಕ್ಕೆ ಆವರ್ತ ಮತ್ತು ಅನಾವರ್ತ ವೆಚ್ಚ ರೂ. 39,04,790 ಗಳಾಗುತ್ತವೆ ಎಂದು ತಿಳಿಸಿ ಈ ನ್ಯಾಯಾಲಯವನ್ನು ಈ ಕೆಳಕಂಡ ಸಿಬ್ಬಂದಿಯೊಂದಿಗೆ ಸೃಷ್ಟಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ.

| | | |
|---|---|---|
| 1 | ಸಿವಿಲ್ ಜಡ್ಜ್ (ಹಿ.ವಿ) | 1 |
| 2 | ಶಿರಸ್ತೇದಾರ್ | 2 |
| 3 | ಶೀಘ್ರಲಿಪಿಗಾರರು | 1 |
| 4 | ಪ್ರ.ದ.ಸ. | 6 |
| 5 | ದ್ವಿ.ದ.ಸ. | 6 |
| 6 | ಬೆರಳಚ್ಚುಗಾರರು | 3 |
| 7 | ಬೆರಳಚ್ಚು-ನಕಲುಗಾರರು | 2 |
| 8 | ಬೇಲೀಫ್ಸ್ | 5 |
| 9 | ಪ್ರೋಸಸ್ ಸರ್ವರ್ | 10 |
| 10 | ಅಟೆಂಡರ್ | 3 |
| 11 | ಪ್ಯೂನ್ | 4 |
| | ಒಟ್ಟು | 43 ಹುದ್ದೆಗಳು |

ಈ ನ್ಯಾಯಾಲಯದ ಸ್ಥಾಪನೆಗೆ ತಗಲುವ ವೆಚ್ಚವು ಈ ಕೆಳಕಂಡಂತಿದೆ:-

**ಆವರ್ತ ವೆಚ್ಚ:**

| | |
|---|---|
| 1) ಸಿಬ್ಬಂದಿ ವೆಚ್ಚ | ರೂ. 28,04,790 |
| 2) ಕಛೇರಿ ವೆಚ್ಚ | ರೂ. 5,25,000 |
| **ಅನಾವರ್ತ ವೆಚ್ಚ:** | |
| ಪೀಠೋಪಕರಣ, ಬೆರಳಚ್ಚು ಯಂತ್ರ ಮತ್ತಿತರೆ | ರೂ. 5,25,000 |
| ಗಣಕ ಯಂತ್ರ ಅಳವಡಿಕೆ ಮತ್ತಿತರೆ | ರೂ. 50,000 |
| ಒಟ್ಟು | ರೂ. 39,04,790 |

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಶಿರಾದಲ್ಲಿ ಒಂದು ಸಿವಿಲ್ ಜಡ್ಜ್ (ಹಿ.ವಿ) ನ್ಯಾಯಾಲಯವನ್ನು ಸ್ಥಾಪಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್‌ಸಿಳ 2004, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2004**

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ತುಮಕೂರು ಜಿಲ್ಲೆ, ಶಿರಾದಲ್ಲಿ ಸಿವಿಲ್ ಜಡ್ಜ್ (ಹಿ.ವಿ) ನ್ಯಾಯಾಲಯವನ್ನು ಈ ಕೆಳಕಂಡ ಸಿಬ್ಬಂದಿಯೊಂದಿಗೆ ಆರ್ಥಿಕ ವರ್ಷ 2004-05 ರಲ್ಲಿ ಸೃಜಿಸಲು ಮಂಜೂರಾತಿ ನೀಡಿದೆ.

| | | |
|---|---|---|
| 1 | ಸಿವಿಲ್ ಜಡ್ಜ್ (ಹಿ.ವಿ) | 1 |
| 2 | ಶಿರಸ್ತೇದಾರ್ | 2 |
| 3 | ಶೀಘ್ರಲಿಪಿಗಾರರು | 1 |
| 4 | ಪ್ರ.ದ.ಸ. | 6 |
| 5 | ದ್ವಿ.ದ.ಸ. | 6 |
| 6 | ಬೆರಳಚ್ಚುಗಾರರು | 3 |
| 7 | ಬೆರಳಚ್ಚು-ನಕಲುಗಾರರು | 2 |
| 8 | ಬೇಲೀಫ್ಸ್ | 5 |
| 9 | ಪ್ರೋಸಸ್ ಸರ್ವರ್ | 10 |
| 10 | ಅಟೆಂಡರ್ | 3 |
| 11 | ಪ್ಯೂನ್ | 4 |
| | ಒಟ್ಟು | 43 ಹುದ್ದೆಗಳು |

ಈ ನ್ಯಾಯಾಲಯದ ಸ್ಥಾಪನೆಗೆ ತಗಲುವ ಆವರ್ತ ವೆಚ್ಚ ಮತ್ತು ಅನಾವರ್ತ ವೆಚ್ಚ ರೂ. 39,04,790 ಗಳನ್ನು ಲೆಕ್ಕ ಶೀರ್ಷಿಕೆ "2014-ನ್ಯಾಯಾಂಗ ಆಡಳಿತ-105-ಸಿವಿಲ್ ಮತ್ತು ಸೆಷನ್ ಕೋರ್ಟ್-02-ಹೊಸ ಅಪರ ನ್ಯಾಯಾಲಯಗಳ ಸ್ಥಾಪನೆ-125-ಆಧುನೀಕರಣ-ಯೋಜನೇತರ" ಅಡಿಯಲ್ಲಿ 2004-05ನೇ ಸಾಲಿನಲ್ಲಿ ಒದಗಿಸಿರುವ ಅನುಧಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಪ್ರಧಾನ ಕಾರ್ಯದರ್ಶಿಗಳು, ಹಣಕಾಸು ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: 4850:04, ದಿನಾಂಕ: 8.10.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1279

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಎಸ್.ಆರ್.ಎಂ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಹಂಚಿಕೆಯಾಗಿರುವ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು 6 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 52 ಎನ್‌ಸಿಇ 2004, ದಿನಾಂಕ: 13.2.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸೋಮಾವತಿ ಹೊಳೆ / 2003 / 1886, ದಿನಾಂಕ: 16/19.10.2004.

**ಪ್ರಸ್ತಾವನೆ:-**

ಮೆಸರ್ಸ್ ಎಸ್.ಆರ್.ಎಂ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ, ಚಿಕ್ಕಮಗಳೂರು ಜಿಲ್ಲೆಯ, ಮೂಡಿಗೆರೆ ತಾಲ್ಲೂಕಿನ ಸಂಶೆ ಗ್ರಾಮದ ಬಳಿ ಸೋಮಾವತಿ ಹೊಳೆಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಸದರಿ ಸ್ಥಳದಲ್ಲಿ ನೀರಿನ ಹರಿವು 4.00 ಕ್ಯುಮೆಕ್ಸ್‌ನಿಂದ 8 ಕ್ಯುಮೆಕ್ಸ್ ಇರುವುದರಿಂದ ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು 2 ಮೆಗಾ ವ್ಯಾಟ್ ನಿಂದ 6 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 52 ಎನ್‌ಸಿಇ 2004, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2004**

3. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಮೆಸರ್ಸ್ ಎಸ್.ಆರ್.ಎಂ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸಂಶೆ ಗ್ರಾಮದ ಬಳಿ ಸೋಮಾವತಿ ಹೊಳೆಗೆ ಅಡ್ಡಲಾಗಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ 2 ಮೆಗಾ ವ್ಯಾಟ್ ಸಾಮರ್ಥ್ಯದ ಸೋಮಾವತಿ ಹೊಳೆ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 6 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಹಂಚಿಕೆ ಆದೇಶದ ನಿಬಂಧನೆಗಳಿಗೊಳಪಟ್ಟು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1281

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಬಿ.ಪ್ರಕಾಶ್, ಹಿರಿಯ ಉಪನ್ಯಾಸಕರು, ಡಯಟ್ ದಾವಣಗೆರೆ ಹಿಂದಿನ ಬಿಇ ಒ, ಹಾವೇರಿ ಇ ವರು ದಂಡನೆ ಆದೇಶದ ವಿರುದ್ಧ ಸಲ್ಲಿಸಿರುವ ಪುನರ್‌ಪರಿಶೀಲನಾ ಮೇಲ್ಮನವಿ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಇ ಡಿ 125 ಡಿಜಿಡಿ 2000 ದಿ:13.10.2000 ಮತ್ತು ಅಧಿಸೂಚನೆ ದಿ:11.4.2001
2. ಸರ್ಕಾರಿ ಆದೇಶ ಸಂ:ಇ ಡಿ 125 ಡಿಜಿಡಿ 2000 ದಿ:21.7.2003
3. ಶ್ರೀ ಬಿ.ಪ್ರಕಾಶ್ ಇ ವರ ಮನವಿ ದಿ:18.10.2003 ಹಾಗೂ 3.1.2004

**ಪ್ರಸ್ತಾವನೆ:**

ಶ್ರೀ ಬಿ.ಪ್ರಕಾಶ್, ಹಿರಿಯ ಉಪನ್ಯಾಸಕರು, ಡಯಟ್ ದಾವಣಗೆರೆ ಇ ವರು ಈ ಹಿಂದೆ ಹಾವೇರಿ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ ಆರೋಪಗಳಿಗೆ ವಿಚಾರಣೆ ನಡೆಸಿದ ನಂತರ ಅವರ ಮೇಲೆ ಇ ದ್ದ 11 ಆರೋಪಗಳಲ್ಲಿ 10ನೇ ಆರೋಪವು ಸಾಬೀತಾಗಿದ್ದರಿಂದ ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ:21.7.2003 ರ ಆದೇಶದ ಮೂಲಕ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 8(ii) ಅಡಿಯಲ್ಲಿ ಅವರಿಗೆ ವಾಗ್ದಂಡನೆ ವಿಧಿಸಲಾಗಿತ್ತು ಹಾಗೂ ಅವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿಯೆಂದೇ ಪರಿಗಣಿಸಲಾಗಿತ್ತು.

ಶ್ರೀ ಪ್ರಕಾಶ್ ಇ ವರು ದಿ:18.10.2003 ರಂದು ಪುನರ್ ಪರಿಶೀಲನಾ ಮನವಿ ಸಲ್ಲಿಸಿ ಸಾಬೀತಾಗಿದೆ ಎಂದು ನಿರ್ಣಯಿಸಲಾದ ಆರೋಪ-10 ಕ್ಕೆ ಸಂಬಂಧಿಸಿದಂತೆ 4 ಶಿಕ್ಷಕರ ಖಾಯಂ ಪೂರ್ವಾವಧಿ ಘೋಷಿಸುವ ಮೊದಲೇ ಅಧೀನ ಸಿಬ್ಬಂದಿಗಳು ಅಂತಹ ಶಿಕ್ಷಕರ ಹೆಸರುಗಳನ್ನು ಬಿಲ್ಲಿನಲ್ಲಿ ಸೇರಿಸಿದ್ದರಿಂದ ಕೆಲಸದ ಒತ್ತಡದಿಂದ ಅಕಸ್ಮಾತಾಗಿ ವಾರ್ಷಿಕ ಮುಂಬಡ್ತಿ ವೇತನ ಮುಂಜೂರು ಮಾಡಲಾಗಿತ್ತೆಂದು ತಪಾಸಣೆ ವೇಳೆಯಲ್ಲಿ ಜಿಲ್ಲಾ ಪಂಚಾಯತ್ ಕಾರ್ಯಾಲಯವು ಆಕ್ಷೇಪಿಸಿದ ಹಿನ್ನಲೆಯಲ್ಲಿ ನೀಡಲಾದ ಆರ್ಥಿಕ ಸೌಲಭ್ಯಗಳನ್ನು ಶಿಕ್ಷಕರಿಂದ ವಸೂಲಾತಿ ಮಾಡಲಾಗಿತ್ತೆಂದು, ತದನಂತರ ಸಕ್ಷಮ ಪ್ರಾಧಿಕಾರವಾದ ಉಪನಿರ್ದೇಶಕರು ಖಾಯಂ ಪೂರ್ವಾವಧಿ ತೃಪ್ತಿಕರವೆಂದು ಆದೇಶ ಹೊರಡಿಸಿದ್ದಾರೆಂದು, ಇ ದರಲ್ಲಿ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲದಿರುವುದರಿಂದ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸುವಂತೆ ಕೋರಿದ್ದರು. ಸದರಿಯವರು ಪುನ: ಮುಂದುವರೆದ ಮನವಿಯನ್ನು ದಿ:3.1.2004 ರಂದು ಸಲ್ಲಿಸಿ, ಅಮಾನತ್ತಿನ ಅವಧಿಯನ್ನು ಕೆಸಿಎಸ್‌ಆರ್ ನಿಯಮ 100(7) ರ ಪ್ರಕಾರ ತನ್ನ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡುವಂತೆ ಕೋರಿದ್ದರು.

ಶ್ರೀ ಬಿ.ಪ್ರಕಾಶ್, ಇ ವರನ್ನು ಮೇಲೆ ಓದಲಾದ ಕ್ರಮಾಂಕ(1)ರ ದಿನಾಂಕ:13.10.2000 ದ ಆದೇಶದ ಮೂಲಕ ಅಮಾನತ್ತಿನಲ್ಲಿಟ್ಟು ತದನಂತರ ದಿ:10.4.2001 ರ ಅಧಿಸೂಚನೆಯಲ್ಲಿ ಅಮಾನತ್ತನ್ನು ತೆರವುಗೊಳಿಸಲಾಗಿದೆ. ಮನವಿದಾರರ ಮನವಿಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಇ ಡಿ 186 ಡಿಜಿಡಿ 2003 ಬೆಂಗಳೂರು, ದಿನಾಂಕ:16ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಬಿ.ಪ್ರಕಾಶ್, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ, ಇ ವರು ದಂಡನೆ ಆದೇಶದ ವಿರುದ್ಧ ದಿನಾಂಕ:18.10.2003 ಹಾಗೂ 3.1.2004 ರಂದು ಸಲ್ಲಿಸಲಾದ ಪುನರ್ ಪರಿಶೀಲನಾ ಮನವಿಯಲ್ಲಿ ಯಾವುದೇ ಹೊಸ ಅಂಶವು ಇ ಲ್ಲದಿರುವ ಕಾರಣ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 26 ರಂತೆ ತಿರಸ್ಕರಿಸಿದೆ. ಹಾಗೂ ಅವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು (ದಿನಾಂಕ:13.10.2000 ರಿಂದ 10.4.2001 ರವರೆಗೆ) ಕೆಸಿಎಸ್‌ಆರ್ 100(7) ರನ್ವಯ ಅವರ ಹಕ್ಕಿನಲ್ಲಿರುವ ಪರಿವರ್ತಿತ ರಜೆ:ಗಳಿಕೆ ರಜೆಯನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1238

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ.(1,2)

**ವಿಷಯ:** ಸರ್ಕಾರಿ ಕಾನೂನು ಕಾಲೇಜು, ಕೋಲಾರ ಇಲ್ಲಿ ಪ್ರಾಂಶುಪಾಲರ ಮತ್ತು ಉಪನ್ಯಾಸಕರ ಹುದ್ದೆಗಳನ್ನು ತುಂಬುವ ಬಗ್ಗೆ

**ಓದಲಾಗಿದೆ:** 1) ಬಾರ್ ಕೌನ್ಸಿಲ್ ಆಫ್ ಇಂಡಿಯಾ ಅವರ ತನಿಖಾ ವರದಿ.

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಇಲಾಖೆಯ ಹಾಲಿ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸರ್ಕಾರಿ ಕಾನೂನು ಕಾಲೇಜಿನ ಪ್ರಾಂಶುಪಾಲರು ಹಾಗೂ ಉಪನ್ಯಾಸಕರುಗಳ ನೇಮಕಾತಿಗೆ ಸಂಬಂಧಿಸಿದಂತೆ, ಯಾವುದೇ ನಿಯಮಗಳನ್ನು ನಿಗದಿಪಡಿಸಿಲ್ಲ. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪುನರ್ ವಿಲೋಕನೆ ಮಾಡಲಾಗುತ್ತಿದೆ. ಪ್ರಸ್ತಾಪಿತ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಪ್ರಾಂಶುಪಾಲರ ಹುದ್ದೆಯನ್ನು ರೂ.12,000–18,300ರ ವೇತನ ಶ್ರೇಣಿವುಳ್ಳ ಗ್ರೇಡ್–1 ಪ್ರಾಂಶುಪಾಲರ ವರ್ಗಾವಣೆಯಿಂದ ಭರ್ತಿ ಮಾಡಲು ಅವಕಾಶ ಮಾಡಿಕೊಳ್ಳಲಾಗಿದೆ. ಹಾಗೆಯೇ, ರೂ.6,000 – 11,200ರ ರಾಜ್ಯ ವೇತನ ಶ್ರೇಣಿ ನಿಗದಿಪಡಿಸಿ ಸ್ನಾತಕೋತ್ತರ ಪದವಿಯಲ್ಲಿ ಸಂಬಂಧಪಟ್ಟ ವಿಷಯದಲ್ಲಿ ಕನಿಷ್ಠ ಶೇಕಡ 55ರಷ್ಟು ಅಂಕ ಪಡೆದಿರುವ ಅಭ್ಯರ್ಥಿಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಿಕೊಳ್ಳಲು ಅವಕಾಶ ಮಾಡಲಾಗಿದೆ. ಕಾರಣ ಪ್ರಸ್ತುತ ಕಾನೂನು ಕಾಲೇಜಿನ ಉಪನ್ಯಾಸಕರುಗಳಿಗೆ ಯು.ಜಿ.ಸಿ.ವೇತನ ಶ್ರೇಣಿಯನ್ನು ವಿಸ್ತರಿಸಿರುವುದಿಲ್ಲ.

ಕೋಲಾರದ ಸರ್ಕಾರಿ ಕಾನೂನು ಕಾಲೇಜಿಗಾಗಿ ಸೂಕ್ತ ಕಟ್ಟಡ ಮತ್ತು ಇನ್ನಿತರೆ ಮೂಲಭೂತ ಸೌಕರ್ಯಗಳು ಇಲ್ಲದ ಪ್ರಯುಕ್ತ ಹಾಗೂ ನಿಗದಿತ ವಿದ್ಯಾರ್ಹತೆ ಪಡೆದ ಖಾಯಂ ಉಪನ್ಯಾಸಕರುಗಳು ಇಲ್ಲದಿರುವ ಇಂತಹ ಹಲವಾರು ಸಮಸ್ಯೆಗಳನ್ನು ಬಾರ್ ಕೌನ್ಸಿಲ್ ಆಫ್ ಇಂಡಿಯಾ ಅವರು ಬಾರ್ ಕೌನ್ಸಿಲ್ ಆಫ್ ಕರ್ನಾಟಕ ಅವರ ಮೂಲಕ ತನಿಖೆ ನಡೆಸಿದ ಕಾರಣ ಸದರಿ ಕಾಲೇಜನ್ನು ಮುಚ್ಚಲು ಶಿಫಾರಸ್ಸು ಮಾಡಿರುತ್ತದೆ. ಈ ವಿಷಯವನ್ನು ಆಡಳಿತ ಇಲಾಖೆಯು ಗಂಭೀರವಾಗಿ ಪರಿಶೀಲಿಸಿದ ನಂತರ ಸೂಕ್ತ ಕಟ್ಟಡ ಮತ್ತು ಮೂಲಭೂತ ಸೌಕರ್ಯಗಳನ್ನು ದೊರಕಿಸಿಕೊಳ್ಳಲು ಕ್ರಮ ಜರುಗಿಸಲಾಗುತ್ತಿದೆ. ಹಾಗೆಯೇ ಕಾಲೇಜಿನಲ್ಲಿ ಮಂಜೂರಾದ ಖಾಯಂ ಉಪನ್ಯಾಸಕರ 04 ಹುದ್ದೆಗಳು ಖಾಲಿ ಇರುವುದರಿಂದ, ಅವುಗಳನ್ನು ನೇರ ನೇಮಕಾತಿಯಿಂದ ತುಂಬಲು ತೀರ್ಮಾನಿಸಿ ಕೋಲಾರ ಕಾಲೇಜನ್ನು ಮುಂದುವರೆಸಲು ಆಡಳಿತ ಇಲಾಖೆಯು ತೀರ್ಮಾನಿಸಿದೆ.

ಈ ಮಧ್ಯೆ ಅರ್ಹ ಗ್ರೇಡ್–1 ಪ್ರಾಂಶುಪಾಲರೊಬ್ಬರನ್ನು ವರ್ಗಾವಣೆ ಮೂಲಕ ಈಗಾಗಲೇ ನೇಮಕಾತಿ ಮಾಡಲಾಗಿದೆ. ಉಪನ್ಯಾಸಕರುಗಳನ್ನು ಭರ್ತಿ ಮಾಡಲು ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶ ಇಲ್ಲದ ಕಾರಣ, ಪ್ರಸ್ತಾಪಿತ ವೃಂದ ಮತ್ತು ನೇಮಕಾತಿ ನಿಯಮಗಳು ಇನ್ನು ಜಾರಿಗೆ ಬಾರದ ಪ್ರಯುಕ್ತ ಒಂದು ಕಾರ್ಯಕಾರಿ ಆದೇಶವನ್ನು ಹೊರಡಿಸುವ ಮೂಲಕ ಅವಕಾಶ ಮಾಡಿಕೊಂಡು ಉಪನ್ಯಾಸಕರ 04 ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 152 ಡಿಸಿಇ 2004, ಬೆಂಗಳೂರು ದಿನಾಂಕ: 6ನೇ ನವೆಂಬರ್ 2004**

ಪ್ರಸ್ತಾವನೆ ಭಾಗದಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರಿ ಕಾನೂನು ಕಾಲೇಜು, ಕೋಲಾರ ಇಲ್ಲಿ ಖಾಲಿ ಇರುವ 04 ಉಪನ್ಯಾಸಕರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಸರ್ಕಾರವು ಆದೇಶಿಸಿದೆ. ನೇಮಕಾತಿ ವಿಧಾನದಲ್ಲಿ ಅಭ್ಯರ್ಥಿಗಳು ಸ್ನಾತಕೋತ್ತರ ಪದವಿಯ ಸಂಬಂಧಪಟ್ಟ ವಿಷಯದಲ್ಲಿ ಕನಿಷ್ಟ ಶೇಕಡ 55 ಅಂಕಗಳನ್ನು ಹೊಂದಿರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ–677–ವೆಚ್ಚ–8/2004 ದಿನಾಂಕ: 28–06–2004ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1239

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)

**ವಿಷಯ:** ಶ್ರೀ ಆರ್.ವೈ.ಹೊಸಪೇಟೆ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ಸೂಚನಾ ಪತ್ರ ಸಂ:ಇಡಿ 1 ಡಿಜಿಡಿ 2004 ದಿನಾಂಕ:21.7.2004

2) ಶ್ರೀ ಹೊಸಪೇಟೆ, ಇವರ ಪ್ರತಿರಕ್ಷಣಾ ಹೇಳಿಕೆ ದಿ:28.7.2004

**ಪ್ರಸ್ತಾವನೆ:**

ಶ್ರೀ ಆರ್.ವೈ.ಹೊಸಪೇಟೆ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ, ಇವರ ಮೇಲಿನ ಕೆಳಕಂಡ ಆರೋಪಗಳಿಗೆ ಸಿಸಿಎ ನಿಯಮ 11 ರಡಿಯಲ್ಲಿ ವಿಚಾರಣೆ ಪ್ರಾರಂಭಿಸಲು ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:21.7.2004 ರಂದು ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

**ಆರೋಪಗಳ ವಿವರ:–**

**ಆರೋಪ–1:** ಬಿಜಾಪುರ ತಾಲ್ಲೂಕಿನ ಸಾರವಾಡ ಗ್ರಾಮ ಪಂಚಾಯತಿಯ 2002 ರಿಂದ 2007 ರ ಹತ್ತನೇ ಪಂಚವಾರ್ಷಿಕ ಯೋಜನೆ ತಯಾರಿಕೆ ಕುರಿತು ಸಾರವಾಡ ಗ್ರಾಮದಲ್ಲಿ ದಿನಾಂಕ:21.12.2003 ರಂದು ಗ್ರಾಮ ಸಭೆ ಕರೆದಿದ್ದು ಸದರಿ ಸಭೆಗೆ ಜಿಲ್ಲಾ ಮಟ್ಟದ ಎಲ್ಲಾ ಅಧಿಕಾರಿಗಳಿಗೆ ತಮ್ಮ ಇಲಾಖೆಗೆ ಸಂಬಂಧಿಸಿದ ಮಾಹಿತಿಗಳೊಂದಿಗೆ ಹಾಜರಾಗಲು ಸಭೆ ನಡೆಯುವ 2 ದಿನದ ಮುಂಚಿತವಾಗಿ ತಿಳುವಳಿಕೆ ನೀಡಿದ್ದಾಗ್ಯೂ ಸಹ ಉಪನಿರ್ದೇಶಕರು ಗೈರು ಹಾಜರಾಗಿರುವುದು.

**ಆರೋಪ–2:** ಜಿಲ್ಲಾ ಪಂಚಾಯತಿಯಲ್ಲಿ ಜರುಗುವ ವಿಶೇಷ ಸಭೆಗಳಿಗೆ ಮುಂಚಿತವಾಗಿ ತಿಳುವಳಿಕೆ ನೀಡಿದ್ದರೂ ಗೈರು ಹಾಜರಾಗುತ್ತಿರುವುದು, ಜಿಲ್ಲಾ ಪಂಚಾಯತ್‌ನಿಂದ ಪೂರ್ವಾನುಮತಿ ಪಡೆಯದೆ ಆಗಿಂದ್ದಾಗ್ಗೆ ಕೇಂದ್ರ ಸ್ಥಾನವನ್ನು ಬಿಡುವುದು ಇಲಾಖೆಯ ಮಹತ್ವದ ಕೆಲಸಗಳಿಗೆ ಅಡಚಣೆಗಳನ್ನು ಉಂಟು ಮಾಡುತ್ತಿದ್ದು, ದುರ್ನಡತೆ ಎಸಗುತ್ತಿರುವುದು.

**ಆರೋಪ–3:** ದಿನಾಂಕ 11.2.2004 ರಂದು ಬಿಜಾಪುರ ಜಿಲ್ಲಾ ಪಂಚಾಯತ್ ಕಾರ್ಯಾಲಯಕ್ಕೆ ಉಪನಿರ್ದೇಶಕರು ಬಂದಾಗ ಮಾನ್ಯ ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಇವರು ಕೆಲವು ಮುಖ್ಯವಾದ ವಿಷಯಗಳ ಬಗ್ಗೆ ಚರ್ಚಿಸಿದ್ದು ಅದಕ್ಕೆ ಯಾವುದೇ ರೀತಿಯ ಸರಿಯಾದ ಉತ್ತರ ನೀಡದೆ, ಹೊರಟುಹೋಗಿದ್ದು, ಇದರಿಂದ ಅಗೌರವ ತೋರಿಸಲು ಕಾರಣರಾಗಿರುವುದು.

**ಆರೋಪ–4:** ಕೇಂದ್ರ ಪ್ರಾಯೋಜಿತ ಕಪ್ಪುಹಲಗೆ ಕಾರ್ಯಾಚರಣೆ ಯೋಜನೆಯಡಿಯಲ್ಲಿ ಕಳಪೆ ಮಟ್ಟದ ಪೀಠೋಪಕರಣ ಖರೀದಿಸಲು ಕಾರಣರಾಗಿದ್ದರೆನ್ನಲಾದ 3 ಬಿಇಒ ಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಪರಿಷ್ಕೃತ ಆರೋಪಣಾ ಪಟ್ಟಿ ಒದಗಿಸುವಂತೆ ಸರ್ಕಾರದಿಂದ ಮೇಲಿಂದ ಮೇಲೆ ಸೂಚನೆ ನೀಡಲಾಗಿದ್ದರೂ ಹಾಗೂ ಜಿಲ್ಲಾ ಪಂಚಾಯತಿಯಿಂದ ಸೂಚನೆ ನೀಡಲಾಗಿದ್ದರೂ ಸಹ ಉಪನಿರ್ದೇಶಕರು ಪರಿಷ್ಕೃತ ಆರೋಪಣಾ ಪಟ್ಟಿಯನ್ನು ಈವರೆಗೂ ಸಲ್ಲಿಸದೆ ಸರ್ಕಾರದ:ಜಿಲ್ಲಾ ಪಂಚಾಯತ್‌ನ ಸೂಚನೆಯನ್ನು ಉಲ್ಲಂಘಿಸಿ ಕರ್ತವ್ಯಚ್ಯುತಿ ಎಸಗಿರುವುದು.

ಶ್ರೀ ಆರ್.ವೈ.ಹೊಸಪೇಟೆ, ಉಪನಿರ್ದೇಶಕರು, ಇವರು ಮೇಲೆ ಓದಲಾದ ಕ್ರಮಾಂಕ 2 ರ ದಿನಾಂಕ:28.7.2004 ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಅವರ ಮೇಲಿನ ಎಲ್ಲಾ ಆರೋಪಗಳನ್ನು ಅಲ್ಲಗಳೆದಿದ್ದಾರೆ. ಪ್ರತಿರಕ್ಷಣಾ ಹೇಳಿಕೆಯಲ್ಲಿ ಒಪ್ಪುವಂತಹ ಯಾವುದೇ ಅಂಶವು ಇಲ್ಲದ ಕಾರಣ ಹೇಳಿಕೆಯನ್ನು ತಿರಸ್ಕರಿಸಿ ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 1 ಡಿಜಿಡಿ 2004 ಬೆಂಗಳೂರು, ದಿನಾಂಕ: 5ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಆರ್.ವೈ.ಹೊಸಪೇಟೆ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 11 (2) ರ ಮೇರೆಗೆ **ಪ್ರಾಂಶುಪಾಲರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಬೆಳಗಾಂ, ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ) ಮೇರೆಗೆ ಶಿಕ್ಷಣಾಧಿಕಾರಿ, ಉಪನಿರ್ದೇಶಕರು ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ, ಇವರನ್ನು ಮಂಡನಾಧಿಕಾರಿಯಾಗಿ** ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳಿಗೆ ಸಿಸಿಎ ನಿಯಮಗಳಡಿ ವಿಚಾರಣೆ ನಡೆಸಿ ವಿಚಾರಣಾ ವರದಿಯೊಂದಿಗೆ ಸಿಸಿಎ ನಿಯಮ 11 (23) (1) ರಲ್ಲಿ ತಿಳಿಸಿರುವ ದಾಖಲೆಗಳೊಂದಿಗೆ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 2 ತಿಂಗಳೊಳಗಾಗಿ ತಪ್ಪದೆ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1240

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.(ಸೇ–1,2)

**ವಿಷಯ:** ಶ್ರೀ ಬಿ.ರಾಮರಾವ್, ನಿವೃತ್ತ ಪ್ರಾಂಶುಪಾಲರು ಡಯಟ್ ಬಳ್ಳಾರಿ, ಅವರು ಎಸಗಿದರೆನ್ನಲಾದ ಆರೋಪಗಳ ವಿಚಾರಣೆಗೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ:ಇ ಡಿ 88 ಡಿಜಿಡಿ 2002 ದಿ:20.12.2003

2. ಅಧಿಕೃತ ಜ್ಞಾಪನಾ ಸಂ:ಇ ಡಿ 88 ಡಿಜಿಡಿ 2002(1) ದಿನಾಂಕ:20.12.2003

**ಪ್ರಸ್ತಾವನೆ:**

ಶ್ರೀ ಬಿ.ರಾಮರಾವ್, ನಿವೃತ್ತ ಪ್ರಾಂಶುಪಾಲರು ಡಯಟ್ ಬಳ್ಳಾರಿ, ಇ ವರು ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬಳ್ಳಾರಿ ಡಯಟ್ ಹಂತದಲ್ಲಿ ನಡೆಯುತ್ತಿದ್ದ ತರಬೇತಿಗಳಿಗೆ ಅಗತ್ಯವಿರುವ ಸಾಮಗ್ರಿಗಳನ್ನು ಖರೀದಿಸುವಲ್ಲಿ ಖರೀದಿ ನಿಯಮಗಳನ್ನು ಉಲ್ಲಂಘಿ ಸಿ ಮುಕ್ತ ಮಾರುಕಟ್ಟೆಯಿಂದ ಸಾಮಗ್ರಿಗಳನ್ನು ಖರೀದಿಸಿದ್ದು, ಈ ಮೂಲಕ ನಕಲಿ ರಶೀದಿಗಳನ್ನು ನಿರ್ವಹಿಸಿ ಸರ್ಕಾರಿ ಹಣ ದುರುಪಯೋಗಪಡಿಸಲು ನೇರ ಕಾರಣರಾಗಿದ್ದು, ಸರ್ಕಾರದ ಖರೀದಿ ಆದೇಶಗಳು ಮತ್ತು ಇ ಲಾಖೆಯ ಮಾರ್ಗದರ್ಶಿ ಸುತ್ತೋಲೆಗಳನ್ನು ಪರಾಮರ್ಶಿಸದೆ ನಿಯಮಗಳ ವಿರುದ್ಧ ಕಾರ್ಯನಿರ್ವಹಿಸಿ, ತಮ್ಮ ಸೇವಾ ಅವಧಿಯಲ್ಲಿ ಹಣಕಾಸಿನ ಅವ್ಯವಹಾರ, ಕರ್ತವ್ಯಲೋಪ, ಅಪ್ರಮಾಣಿಕತೆ ಎಸಗುವ ಮೂಲಕ ದುರ್ನಡತೆ ಎಸಗಿ ರುವುದು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ದಿನಾಂಕ:20.12.2003 ರ ಆದೇಶದ ಮೂಲಕ ಕೆಸಿಎಸ್‌ಆರ್ ನಿಯಮ 214 ರಡಿಯಲ್ಲಿ ಅವರ ವಿರುದ್ಧ ವಿಚಾರಣೆ ನಡೆಸಲು ಸರ್ಕಾರದ ಮಂಜೂರಾತಿ ಆದೇಶ ನೀಡಲಾಗಿತ್ತು. ಹಾಗೂ ಮೇಲೆ ಓದಲಾದ ಕ್ರಮಾಂಕ (2)ರ ದಿ:20.12.2003 ರ ಅಧಿಕೃತ ಜ್ಞಾಪನದ ಮೂಲಕ ಆರೋಪಣಾ ಪಟ್ಟಿಯನ್ನು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11ರಡಿ ಜಾರಿಗೊಳಿಸಲು ನೊಂದಾಯಿತ ಅಂಚೆ ಮೂಲಕ ನಿವೃತ್ತಿಯ ನಂತರ ಲಭ್ಯವಿದ್ದ ಮನೆಯ ವಿಳಾಸಕ್ಕೆ ಕಳುಹಿಸಲಾಗಿತ್ತು. ಆದರೆ ಸದರಿಯವರು ಲಭ್ಯವಿಲ್ಲದ ಕಾರಣ ಅವರ ಮನೆಯ ಗೋಡೆಗೆ ನೋಟೀಸನ್ನು ಅಂಟಿಸಿ ಸಾಕ್ಷಿಗಳ ಸಮ್ಮುಖದಲ್ಲಿ ಮಹಜರ್ ಮಾಡಿಸಿ, ಬಳ್ಳಾರಿ ಉಪನಿರ್ದೇಶಕರು ದಿನಾಂಕ:13.9.2004 ರಂದು ವರದಿ ಸಲ್ಲಿಸಿದ್ದಾರೆ. ಸೂಚನಾ ಪತ್ರವನ್ನು ಬೆಂಗಳೂರಿನ ಬಹುಮಹಡಿ ಕಟ್ಟಡದ 5ನೇ ಮಹಡಿಯಲ್ಲಿರುವ ಶಿಕ್ಷಣ ಇ ಲಾಖೆಯ ಸೂಚನಾ ಫಲಕದಲ್ಲಿ ದಿನಾಂಕ:12.8.2004 ರಂದು ಪ್ರಕಟಿಸಲಾಗಿದೆ. ಹಾಗೂ ಸೂಚನಾ ಪತ್ರವನ್ನು (ಅಧಿಕೃತ ಜ್ಞಾಪನ) ದಿನಾಂಕ:30.9.2004 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ. ಇ ದರಿಂದಾಗಿ ಸಿಸಿಎ ನಿಯಮ 28-ಎ ರಲ್ಲಿ ಸೂಚಿಸಿದ ವಿಧಾನವನ್ನು ಪಾಲಿಸಿದಂತಾಗಿದೆ.

2. ಆದರೆ ಶ್ರೀ ರಾಮರಾವ್ ಇ ವರು ಇ ಲ್ಲಿಯವರೆಗೂ ಯಾವುದೇ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸದೇ ಇ ರುವುದರಿಂದ ಪ್ರಕರಣದ ಬಗ್ಗೆ ಪೂರ್ಣ ಪ್ರಮಾಣದ ವಿಚಾರಣೆಯನ್ನು ನಡೆಸುವುದು ಸೂಕ್ತವೆಂದು ಸರ್ಕಾರವು ಮನಗಂಡು, ಕೆಳಗಿನಂತೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಕ ಮಾಡಿದೆ.

**ಸರ್ಕಾರದ ಆದೇಶ ಸಂಖ್ಯೆ ಇ ಡಿ 88 ಡಿಜಿಡಿ 2002 ಬೆಂಗಳೂರು ದಿನಾಂಕ: 6ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಬಿ.ರಾಮರಾವ್, ನಿವೃತ್ತ ಪ್ರಾಂಶುಪಾಲರು, ಡಯಟ್ ಬಳ್ಳಾರಿ, ಇ ವರ ಮೇಲಿನ ಆರೋಪಗಳಿಗೆ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2) ಅಡಿಯಲ್ಲಿ ಪ್ರದತ್ತವಾದ ಅಧಿಕಾರಿಗಳನ್ನು ಚಲಾಯಿಸಿ **ಶ್ರೀ ಚಿದ್ರೆ ಶಂಕರಯ್ಯ ಸ್ವಾಮಿ, ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ,** ಇ ವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ) ಮೇರೆಗೆ **ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇ ಲಾಖೆ, ಬಳ್ಳಾರಿ,** ಇ ವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಪ್ರತಿ ಆರೋಪಗಳ ಬಗ್ಗೆ ಸಿಸಿಎ ನಿಯಮಗಳಡಿ ವಿಚಾರಣೆ ನಡೆಸಿ ಸ್ಪಷ್ಟ ನಿರ್ಣಯಗಳನ್ನೊಳಗೊಂಡ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ ಎರಡು ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1241

**ಎಫ್.ಆರ್.ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ.(ಸೇ - 1,2)

## ENERGY SECRETARIAT

**Sub:** Enhancement of 58.75 M. W. Wind Power capacity in favour of M/s Suzlon Energy Limited - reg.

**Read:** 1. Government Order No : DE 98 NCE 2000, dated : 10.7.2000.

2. Government Order No : DE 137 NCE 2001, dated : 19.9.2001.
3. Government Order No : DE 325 NCE 2002, dated : 21.12.2002.
4. Government Order No : DE 314 NCE 2004, dated : 9.9.2004.
5. Letter No : KRED / 08 / SEL / 2004 / 1868, dated : 15.10.2004 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1 to 4) above, sanction was accorded to implement Wind Power Projects in various Districts of Karnataka to M/s Suzlon Energy Limited.

2. In the letter read at (5) above, The Managing Director, Karnataka Renewable Energy Development Limited, Bangalore, has recommended to enhance the total capacity of 58.75 M.W. in favour of M/s Suzlon Energy Limited in various Districts of Karnataka.

3. Hence, the following Order :

**Government Order No: DE 346 NCE 2004, Bangalore, Dated : 9th November 2004**

3. In the circumstances explained in the preamble, and after careful consideration Government are pleased to enhance the capacity of Wind Power Project in various Districts of Karnataka in favour of M/s Suzlon Energy Limited as detailed below :-

| Sl. No | Government Order | Site with Capacity enhanced in the I[st] stage. | Enhancement of capacity proposed along with its existing capacities | Enhanciable capacity in M.W. |
|---|---|---|---|---|
| 1. | DE 98 NCE 2000, Bangalore. dated : 10.7.2000. DE 325 NCE 2002, Bangalore. dated : 21.12.2000. | Jogimatti Part A-20 M.W. | Part-A enhanced to 23.75 M.W. | 3.75 M.W. |
| 2. | DE 98 NCE 2000, Bangalore. dated : 10.7.2000. | Jogimatti Part B-10 M.W. Subjecting Ist time. | Part-B enhanced to 37.50 M.W. | 27.50 M.W. |
| 3. | DE 98 NCE 2000, Bangalore. dated : 10.7.2000. DE 325 NCE 2002, Bangalore. dated : 21.12.2000. | Jajikal Gudda 42.5 M.W. | 50 M.W. | 7.50 M.W. |
| 4. | DE 137 NCE 2001, Bangalore. dated : 19.9.2001. DE 325 NCE 2002, Bangalore. dated : 21.12.2000. | Sogi 30 M.W. | 41.25 M.W. | 11.25 M.W. |
| 5. | DE 98 NCE 2000, Bangalore. dated : 10.7.2000. DE 314 NCE 2002, Bangalore. dated : 9.9.2004. | Gujanur 10 M.W. | 18.75 M.W. | 8.75 M.W. |
| Total | | | | 58.75 M.W. |

The other terms and conditions of the original Government Order read at 1 to 4 above are IPSOFACTO applicable.

By Order and in the Name of the Governor of Karnataka.

PR-1242

**K.L.JAYARAM**

Under Secretary to Government, Energy Department.

**ADDENDUM**

**No : DE 27 NCE 2004, Bangalore, Dated : 6th November 2004**

In Government Order No: DE 27 NCE 2004, dated : 29.1.2004 the words appeared in the second line of the order portion "Survey No: 94" shall be read as "Survey No : 93 and 94".

By Order and in the Name of the Governor of Karnataka.

PR-1243

**K.L.JAYARAM**

Under Secretary to Government, Energy Department.

**Sub:** Transfer of 1.25 M.W. Wind Power Capacity in favour of M/s Jivraj Tea Limited - orders relating to.

**Read:**
1. Government Order No : DE 280 NCE 2004, dated : 17.8.2004.
2. Letter No : KRED / 08 / JTL / 2004 / 1955, dated : 30.10.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated : 17.8.2004 read at (1) above, sanction has been accorded for implementation of 12.50 M.W. capacity Wind Power Project at Chitradurga District to M/s Kurumaradikere Energy Limited.

(2) Now, the Managing Director, Karnataka Renewable Energy Development Limited, Bangalore, in his letter dated : 30.10.2004 read at (2) above, has recommended to the Government for transfer of 1.25 M.W. Wind Power capacity in favour of M/s Jivraj Tea Limited, at survey No : 62 of Ingaladalu Village of Chitradurga district, from out of the sanctioned 12.50 M.W. capacity of M/s Kurumaradikere Energy Limited.

(3) The proposal has been examined and pass the following order :

**Government Order No : DE 360 NCE 2004, Bangalore, Dated : 6th November 2004**

(4) Government are pleased to accord sanction for transfer of 1.25 M.W. Wind Power capacity in favour of M/s Jivraj Tea Limited, in the schedule indicated below, from out of 12.50 M.W. capacity of M/s Kurumaradikere Energy Limited, allotted in the Government order dated : 17.8.2004.

**SCHEDULE**

| Sl. No. | Village Name | Taluk / District | Survey Number | Extent of acres |
|---|---|---|---|---|
| 1 | Ingaladalu | Chitradurga. | 62 | 1 |

(5) The terms and conditions of the original allotment made in the Government order read at (1) above are IPSOFACTO applicable.

By Order and in the Name of the Governor of Karnataka.

PR-1244

**K.L.JAYARAM**

Under Secretary to Government, Energy Department.

**Sub:** Transfer of 1.25 M.W. Wind Power Capacity in favour of M/s Sanjana Power - orders relating to.

**Read:** 1. Government Order No : DE 280 NCE 2004, dated : 17.8.2004.

2. Letter No : KRED / 08 / SP / 2004 / 1948 , dated : 30.10.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated : 17.8.2004 read at (1) above, sanction has been accorded for implementation of 12.50 M.W. capacity Wind Power Project at Chitradurga District to M/s Kurumaradikere Energy Limited.

(2) Now, the Managing Director, Karnataka Renewable Energy Development Limited, Bangalore, in his letter dated: 30.10.2004 read at (2) above, has recommended to the Government for transfer of 1.25 M.W. Wind Power capacity in favour of M/s Sanjan Power, at survey No : 62 of Ingaladalu Village of Chitradurga district, from out of the sanctioned 12.50 M.W. capacity of M/s Kurumaradikere Energy Limited.

(3) The proposal has been examined and pass the following order :

**Government Order No : DE 361 NCE 2004, Bangalore, Dated : 6th November 2004**

(4) Government are pleased to accord sanction for transfer of 1.25 M.W. Wind Power capacity in favour of M/s Sanjana Power, in the schedule indicated below, from out of 12.50 M.W. capacity of M/s Kurumaradikere Energy Limited, allotted in the Government order dated : 12.8.2004.

**SCHEDULE**

| Sl. No. | Village Name | Taluk / District | Survey Number | Extent of acress |
|---|---|---|---|---|
| 1 | Ingaladalu | Chitradurga. | 62 | 1 |

(5) The terms and conditions of the original allotment made in the Government order read at (1) above are IPSOFACTO applicable.

By Order and in the Name of the Governor of Karnataka.

PR-1245

**K.L.JAYARAM**

Under Secretary to Government, Energy Department.

**Sub:** Transfer of 1.25 M.W. Wind Power Capacity in favour of M/s Navalakha Translines - orders relating to.

**Read:** 1. Government Order No : DE 325 NCE 2004, dated : 21.12.2002.

2. Letter No: KRED / 08 / NT / 2004 / 1954, dated : 30.10.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated : 21.12.2002 read at (1) above, sanction has been accorded for implementation of 8 M.W. capacity Wind Power Project at Chitradurga District to M/s Suzlon Energy Limited.

(2) Now, the Managing Director, Karnataka Renewable Energy Development Limited, Bangalore, in his letter dated: 30.10.2004 read at (2) above, has recommended to the Government for transfer of 1.25 M.W. Wind Power capacity in favour of M/s Navalakha Translines, at survey No: 33/P of Chitradurga Village of Chitradurga district, from out of the sanctioned 8 M.W. capacity of M/s Suzlon Energy Limited.

(3) The proposal has been examined and pass the following order :

**Government Order No: DE 359 NCE 2004, Bangalore, Dated : 6th November 2004**

(4) Government are pleased to accord sanction for transfer of 1.25 M.W. Wind Power capacity in favour of M/s Navalakha Translines, in the schedule indicated below, from out of 8 M.W. capacity of M/s Suzlon Energy Limited, allotted in the Government order dated: 21.12.2002.

**SCHEDULE**

| Sl. No. | Village Name | Taluk / District | Survey Number | Extent of acres |
|---|---|---|---|---|
| 1 | Chitradurga. | Chitradurga. | 33/P | 1 |

(5) The terms and conditions of the original allotment made in the Government order read at (1) above are IPSOFACTO applicable.

By Order and in the Name of the Governor of Karnataka.

PR-1246

**K.L.JAYARAM**

Under Secretary to Government, Energy Department.

**Sub:** Transfer of 15 M.W. Wind Power Capacity in favour of M/s Enercon India Limited - orders relating to.

**Read:** 1. Government Order No : DE 110 NCE 2004, dated : 11.3.2004.

2. Letter No : KRED / 08 / SPML / 2004 / 2002, dated : 3.11.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated : 11.3.2004 read at (1) above, sanction was accorded for implementation of 19.8 M.W. capacity Wind Power Project at Gadag District to M/s Subhash Projects and Marketing Limited.

(2) Now, the Managing Director, Karnataka Renewable Energy Development Limited, Bangalore, in his letter dated : 3.11.2004 read at (2) above, has recommended to Government for transfer of 15 M.W. Wind Power capacity in favour of M/s Enercon India Limited, at survey No : 456, 471, 161, 152 & 44 of Hirevaddatti, Chikkavaddattiand Kadakol Villages of Gadag district, from out of the sanctioned 19.8 M.W. capacity of M/s Subhash Projects and Marketing Limited.

(3) The proposal has been examined and pass the following order :

**Government Order No : DE 366 NCE 2004, Bangalore, Dated : 8th November 2004**

(4) Government are pleased to accord sanction for transfer of 15 M.W. Wind Power capacity in favour of M/s Enercon India Limited in the schedule indicated below, from out of 19.8 M.W. capacity of M/s Subhash Projects and Marketing Limited allotted in the Government order dated : 11.3.2004.

**SCHEDULE**

| Sl. No. | Village Name | Taluk / District | Survey Number | Extent of area (ha) |
|---|---|---|---|---|
| 1 | Hirevaddatti | Mundargi / Gadag | 456 | 15.73 |
| 2 | Hirevaddatti | Mundargi / Gadag | 471 | 9.39 |
| 3 | Chikkavaddatti | Mundargi / Gadag | 161 | 7.00 |
| 4 | Chikkavaddatti | Mundargi / Gadag | 152 | 5.00 |
| 5 | Kadakol | Mundargi / Gadag | 44 | 4.59 |
| | | | Total | 41.71 |

(5) The terms and conditions of the original allotment made in the Government order read at (1) above are IPSOFACTO applicable.

By Order and in the Name of the Governor of Karnataka.

PR-1247

**K.L.JAYARAM**

Under Secretary to Government, Energy Department.

**Sub:** Transfer of 3.2 M.W. Wind Power Capacity in favour of M/s Enercon Wind Farms (Karnataka) Limited - orders relating to.

**Read:** 1. Government Order No : DE 110 NCE 2001, dated : 11.3.2004.

2. Letter No : KRED / 08 / SPML / 2004 / 2001, dated : 3.11.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated : 11.3.2004 read at (1) above, sanction was accorded for implementation of 19.8 M.W. capacity Wind Power Project at Gadag District to M/s Subhash Projects and Marketing Limited.

(2) Now, the Managing Director, Karnataka Renewable Energy Development Limited, Bangalore, in his letter dated: 3.11.2004 read at (2) above, has recommended to Government for transfer of 3.2 M.W. Wind Power capacity in favour of M/s Enercon Wind Farms (Karnataka) Limited, at survey No : 151 of Chikkavaddatti Village of Gadag district, from out of the sanctioned 19.8 M.W. capacity of M/s Subhash Projects and Marketing Limited.

(3) The proposal has been examined and pass the following order :

**Government Order No: DE 367 NCE 2004, Bangalore, Dated : 8th November 2004**

(4) Government are pleased to accord sanction for transfer of 3.2 M.W. Wind Power capacity in favour of M/s Enercon Wind Farms (Karnataka) Limited in the schedule indicated below, from out of 19.8 M.W. capacity of M/s Subhash Projects and Marketing Limited allotted in the Government order dated : 11.3.2004.

**SCHEDULE**

| Sl. No. | Village Name | Taluk / District | Survey Number | Extent of area (ha) |
|---|---|---|---|---|
| 1 | Chikkavaddatti | Mundargi Gadag | 151 | 13.40 |

(5) The terms and conditions of the original allotment made in the Government order read at (1) above are IPSOFACTO applicable.

By Order and in the Name of the Governor of Karnataka.

PR-1248

**K.L.JAYARAM**

Under Secretary to Government, Energy Department.

**Sub:** Transfer of 0.6 M.W. Wind Power Capacity in favour of M/s Swaraj P. V. C. Pipes Private Limited - orders relating to.

**Read:** 1. Government Order No : DE 98 NCE 2000, dated : 10.7.2000.

2. Letter No : KRED / 08 / SPPL / 2004 / 1930, dated : 27.10.2004 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated : 10.7.2000 read at (1) above, sanction was accorded for implementation of 149 M.W. capacity Wind Power Project at Chitradurga District to M/s Enercon India Limited.

(2) Now, the Managing Director, Karnataka Renewable Energy Development Limited, Bangalore, in his letter dated : 27.10.2004 read at (2) above, has recommended to Government for transfer of 0.6 M.W. Wind Power capacity in favour of M/s Swaraj P. V. C. Pipes Private Limited, at survey No : 2 of Katheholle Village of Chitradurga district, from out of the sanctioned 149 M.W. capacity of M/s Enercon India Limited.

(3) The proposal has been examined and pass the following order :

**Government Order No : DE 352 NCE 2004, Bangalore, Dated : 4th November 2004**

(4) Government are pleased to accord sanction for transfer of 0.6 M.W. Wind Power capacity in favour of M/s Swaraj P. V. C. Pipes Private Limited in the schedule indicated below, from out of 149 M.W. capacity of M/s Enercon India Limited allotted in the Government order dated : 10.7.2000.

**SCHEDULE**

| Sl. No. | Village Name | Taluk / District | Survey Number | Extent of area (ha) |
|---|---|---|---|---|
| 1 | Katheholle | Hiriyur Chitradurga. | 2 | 2.25 |

(5) The terms and conditions of the original allotment made in the Government order read at (1) above are IPSOFACTO applicable.

By Order and in the Name of the Governor of Karnataka.

PR-1249

**K.L.JAYARAM**

Under Secretary to Government, Energy Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ.ದಯಾನಂದ ಮುಖ್ಯ ಇ ಂಜಿನಿಯರ್ ಇ ವರ ವಿರುದ್ಧ ಇ ಲಾಖಾ ವಿಚಾರಣೆ ಅಂತಿಮ ಆದೇಶ ಕುರಿತು.

**ಓದಲಾಗಿದೆ:** 1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 26 ಏಸ್‌ಇ ಏನ್ 2000 ದಿನಾಂಕ: 8-11-2003.

2. ಶ್ರೀ ಬಿ.ದಯಾನಂದ ರವರ ಲಿಖಿತ ಉತ್ತರ ದಿನಾಂಕ: 17-1-2003.

3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 26 ಏಸ್‌ಇ ಏನ್ 2000 ದಿನಾಂಕ: 1-7-2004.

4. ವಿಚಾರಣಾಧಿಕಾರಿಗಳ ವರದಿ ದಿನಾಂಕ:24-8-2004.

**ಪ್ರಸ್ತಾವನೆ:**

ಶ್ರೀ ದಯಾನಂದ ರವರು 1999-2000 ರ ಅವಧಿಯಲ್ಲಿ ನೀರಾವರಿ (ದಕ್ಷಿಣ) ಮೈಸೂರು ಇ ಲ್ಲಿ ಮುಖ್ಯ ಅಭಿಯಂತರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸರ್ಕಾರದಿಂದ ಪತ್ರ ಸಂಖ್ಯೆ:ಲೋಇ 16 ಏಫ್‌ಬಿಸಿ 99 ದಿನಾಂಕ: 31-12-99 ರಲ್ಲಿ ಮೈಸೂರು ವಲಯಕ್ಕೆ ಬಿಡುಗಡೆಯಾದ ಹಣಭರವಸೆ ಪತ್ರದ ಮೊತ್ತ ರೂ.470 ಲಕ್ಷದ ಪೈಕಿ ಶೇಕಡ 3 ರಷ್ಟನ್ನು ಹಾರಂಗಿ ಯೋಜನೆಗೆ ಸರ್ಕಾರದ ಅನುಮತಿಯನ್ನು ಪಡೆಯದೆ ಬದಲಿಸಿರುವುದರ ಸಂಬಂಧ ದುರ್ನಡತೆಗೆ ಇ ವರ ವಿರುದ್ಧ ಈ ಕೆಳಕಂಡ ದೋಷಾರೋಪಣೆಗಳನ್ನು ಮೇಲೆ ಉಲ್ಲೇಖ(1) ರಲ್ಲಿ ಓದಲಾದ ಸರ್ಕಾರದ ನೋಟೀಸಿನಲ್ಲಿ ಆರೋಪಿಸಲಾಗಿತ್ತು.

(1) ಮೈಸೂರು ವಲಯಕ್ಕೆ ಜನವರಿ 2000ದ ಮಾಹೆಯಲ್ಲಿ ಸರ್ಕಾರದಿಂದ ಬಿಡುಗಡೆಗೊಳಿಸಲ್ಪಟ್ಟ ಹಣ ಭರವಸೆಯ ಪತ್ರದ ಮೊತ್ತದಲ್ಲಿ ಶೇಕಡ 3 ರಷ್ಟನ್ನು ನೀರಾವರಿ ಇ ಲಾಖೆಯ ಕಾರ್ಯದರ್ಶಿಯ ವಿವೇಚನೆಗೆ ಮೀಸಲಿಟ್ಟಿದ್ದು ಅದನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ನೀಇ 209 ಏಂಏಂಕೆ 99 ದಿನಾಂಕ: 1-9-2000 ರ ಪ್ರಕಾರ ಸರ್ಕಾರದ ಕಾರ್ಯದರ್ಶಿಗಳ ಅನುಮೋದನೆ ಪಡೆಯದೇ ಅವರ ವ್ಯಾಪ್ತಿಯಲ್ಲಿದ್ದ ಇ ತರ ವಿಭಾಗಗಳಿಗೆ ವಿತರಿಸಿ ದುರ್ನಡತೆಯನ್ನು ಏಸಗಿರುತ್ತಾರೆ.

ಉಲ್ಲೇಖ(1) ರಲ್ಲಿ ಓದಲಾದ ನೋಟೀಸಿಗೆ ಆರೋಪಿತ ಅಧಿಕಾರಿ ಉಲ್ಲೇಖ(2) ರಲ್ಲಿ ಓದಲಾದ ಅವರ ಲಿಖಿತ ಉತ್ತರದಲ್ಲಿ ಅವರು ಯಾವುದೇ ದುರ್ನಡತೆಯನ್ನು ಏಸಗಿಲ್ಲವೆಂದು ಆಪಾದನೆಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಇ ವರ ಮೇಲಿನ ದೋಷಾರೋಪಣೆಗಳ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಮೇಲೆ ಉಲ್ಲೇಖ(3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಪಾಲನೇತ್ರ ರವರನ್ನು ವಿಚಾರಣಾಧಿಕಾರಿಯವರನ್ನಾಗಿ ನೇಮಿಸಲಾಗಿತ್ತು. ಅದರಂತೆ ವಿಚಾರಣೆಯನ್ನು ಕೈಗೊಂಡ ವಿಚಾರಣಾಧಿಕಾರಿಗಳು ಉಲ್ಲೇಖ(4) ರಲ್ಲಿ ಓದಲಾದ ಅವರ ಪತ್ರ ದಿನಾಂಕ: 24-8-2004 ರಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಯವರು ಅಪಾದಿತರ ವಾದವನ್ನು ಸಾಕ್ಷ್ಯಾಧಾರಗಳನ್ನು ಮತ್ತು ಮಂಡನಾಧಿಕಾರಿಯ ವಾದವನ್ನು ಪರಿಶೀಲಿಸಿ ಅಪಾದಿತ ಅಧಿಕಾರಿಯ ಮೇಲೆ ಹೊರಿಸಲಾದ ಆರೋಪಗಳು ರುಜುವಾತಾಗಿಲ್ಲವೆಂದು ವರದಿ ಮಾಡಿರುತ್ತಾರೆ. ಇ ವರ ವರದಿಯಲ್ಲಿ ಸರ್ಕಾರದ ಸುತ್ತೋಲೆ ದಿನಾಂಕ:1-1-2000 ರಲ್ಲಿ ಸರ್ಕಾರದ ಪೂರ್ವಾನುಮತಿಯನ್ನು ಪಡೆಯುವ ಬಗ್ಗೆ ನಿಖರವಾದ ಸ್ಪಷ್ಟತೆಯಿರುವುದಿಲ್ಲವೆಂದು, ಸದರಿ ಶೇಕಡ 3 ರಷ್ಟು ಹಣವನ್ನು ಹಾರಂಗಿ ಯೋಜನೆಗೆ ತುರ್ತು ನೀರಿನ ಮತ್ತು ವಿದ್ಯುಚ್ಛಕ್ತಿ ಬಿಲ್ಲುಗಳನ್ನು ಪಾವತಿಸಲು ಬದಲಿಸಬೇಕೆಂದು ಆರೋಪಿತರು ದೂರವಾಣಿಯ ಮೂಲಕ ಸರ್ಕಾರದ ನೀರಾವರಿ ಇ ಲಾಖೆಯ ಕಾರ್ಯದರ್ಶಿಗಳ ಅವಗಾಹನೆಗೆ ತರಲು ಚರ್ಚಿಸಿರುವ ಸಂದರ್ಭವನ್ನು ಸಾಕ್ಷಿಯ ಹೇಳಿಕೆಯಿಂದ ದೃಢಪಟ್ಟಿರುವುದಾಗಿಯೂ ಹಾಗೂ ತದನಂತರ ಸರ್ಕಾರದ ಮಟ್ಟದಲ್ಲಿ ಈ ಪುನರ್ ವಿನಿಯೋಗವನ್ನು ದಿನಾಂಕ: 31-3-2000ದ ಅಂತ್ಯಕ್ಕೆ ಅನ್ವಯಿಸುವಂತೆ ವರುಣಾ ಯೋಜನೆಯ ಹಂಚಿಕೆಯನ್ನು ಅನುಮೋದಿಸಿರುವುದರಿಂದ ಆರೋಪಿತ ಅಧಿಕಾರಿಯು ಯಾವುದೇ

ದುರುದ್ದೇಶದಿಂದ ಅಥವಾ ನಿಯಮಗಳಿಗೆ ವಿರುದ್ಧವಾಗಿ ಕ್ರಮ ತೆಗೆದುಕೊಂಡಿಲ್ಲವೆಂದು ರುಜುವಾತಾಗಿರುವುದರಿಂದ ಅವರ ಮೇಲಿನ ಆಪಾದನೆಗಳು ರುಜುವಾತಾಗಿಲ್ಲವೆಂಬ ಅಭಿಪ್ರಾಯ ಪಟ್ಟಿರುತ್ತಾರೆ.

ಮೇಲ್ಕಂಡ ವಿಚಾರಣಾಧಿಕಾರಿಗಳ ವರದಿ ಮತ್ತು ತತ್ಸಂಬಂಧ ವಾಸ್ತವಾಂಶಗಳನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 26 ಎಸ್ಇ ಎನ್ 2000 ಬೆಂಗಳೂರು, 9ನೇ ನವೆಂಬರ್ 2004.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಶ್ರೀ ಬಿ.ದಯಾನಂದ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಸದರಿಯವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿದೆ.

ಈ ವಿಚಾರಣೆಯು ನಡೆಯದಿದ್ದಲ್ಲಿ ಶ್ರೀ ಬಿ.ದಯಾನಂದ ರವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಅಂತಹ ಎಲ್ಲ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ,**

ಪಿ.ಆರ್. 1250 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಪಿ.ಪ್ರಕಾಶ್, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 109 ಎಸ್ಇ ಎನ್ 2003 ದಿನಾಂಕ: 29-01-2004.

2. ಶ್ರೀ ಪಿ.ಪ್ರಕಾಶ್, ನಿವೃತ್ತ ಮುಖ್ಯ ಇಂಜಿನಿಯರ್ ರವರ ದಿನಾಂಕ: 6-2-2004 ರ ಲಿಖಿತ ಉತ್ತರ.

3. ಕೆ.ಎ.ಟಿ. ಅರ್ಜಿಸಂಖ್ಯೆ:2846/04 ರ ಬಗ್ಗೆ ದಿನಾಂಕ: 21-6-2004 ರ ಆದೇಶ.

**ಪ್ರಸ್ತಾವನೆ:**

ಶ್ರೀ ಪಿ. ಪ್ರಕಾಶ್, ನಿವೃತ್ತ ಮುಖ್ಯ ಇಂಜಿನಿಯರ್ ರವರು ದಿನಾಂಕ: 8-5-1997 ರಿಂದ 21-5-1999ರ ಅವಧಿಯಲ್ಲಿ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಯೋಜನೆ (ಕೆ.ಹೆಚ್.ಎಸ್.ಡಿ.ಪಿ) ಯಲ್ಲಿ ಧಾರವಾಡದ ಕಾರ್ಯಪಾಲಕ ಇಂಜಿನಿಯರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಯೋಜನೆಯಡಿ ರಾಜ್ಯದ ಆಯ್ದ 204 ಆಸ್ಪತ್ರೆಗಳಲ್ಲಿ ನವೀಕರಣ ಮತ್ತು ವಿಸ್ತರಣೆ ಕೆಲಸಗಳನ್ನು ವಿಶ್ವಬ್ಯಾಂಕ್ ಧನ ಸಹಾಯದೊಡನೆ ಕೈಗೊಂಡಿದ್ದು ಅದರ ಪೈಕಿ ಧಾರವಾಡದ ಜಿಲ್ಲಾ ಮತ್ತು ಹಾವೇರಿ ಸಬ್‌ಡಿವಿಷನಲ್ ಆಸ್ಪತ್ರೆ ರಿಪೇರಿ ಮತ್ತು ವಿಸ್ತರಣೆ ಯೋಜನೆಯನ್ನು ಕಾರ್ಯಗತಗೊಳಿಸುವ ಸಮಯದಲ್ಲಿ ಎಲ್ಲಾ ನಿಬಂಧನೆಗಳನ್ನು ಉಲ್ಲಂಘಿಸಿ ದುರುದ್ದೇಶಪೂರ್ವಕವಾಗಿ ಗುತ್ತಿಗೆದಾರರಿಗೆ ಸರ್ಕಾರದ ಹಣ ರೂ.1,78,31,672/- ನ್ನು ಮಂಜೂರುಮಾಡುವ ಮೂಲಕ ಸರ್ಕಾರಕ್ಕೆ ನಷ್ಟವುಂಟು ಮಾಡಿದ ಆರೋಪಕ್ಕಾಗಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವೆ (ಸಿಸಿಎ) ನಿಯಮಾವಳಿ ನಿಯಮ-11-11(ಎ) ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಮೇಲೆ(1) ರಲ್ಲಿ ಓದಲಾದ ದಿನಾಂಕ: 28-1-2004ರ ನೋಟೀಸ್ ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಶ್ರೀ ಪಿ. ಪ್ರಕಾಶ್ ರವರು ಮೇಲೆ(2) ರಲ್ಲಿ ಓದಲಾದ ದಿನಾಂಕ:6-2-2004 ರ ಲಿಖಿತ ಉತ್ತರವನ್ನು ಸಲ್ಲಿಸಿ ಈ ಬಗ್ಗೆ ಕೆ.ಎ.ಟಿಯಲ್ಲಿ ಇನ್ನೂ ವಿಚಾರಣೆ ಹಂತದಲ್ಲಿರುವಾಗ ತನಗೆ ಕಾರಣ ಕೇಳುವ ನೋಟೀಸನ್ನು ನೀಡಿದ ಕ್ರಮವು ನ್ಯಾಯಾಲಯ ನಿಂದನಾ ಕ್ರಮವಾಗಿರುತ್ತದೆ ಎಂದು ತಿಳಿಸುತ್ತಾ ತಮ್ಮ ವಿರುದ್ಧ ನೀಡಿರುವ ನೋಟೀಸನ್ನು ರದ್ದುಪಡಿಸುವಂತೆ ಕೋರಿದ್ದಾರೆ. ಮೇಲೆ(3) ರಲ್ಲಿ ಓದಲಾದ ಕೆ.ಎ.ಟಿ ಯ ಅಂತಿಮ ಆದೇಶದಲ್ಲಿ ಅರ್ಜಿದಾರರ ದಿನಾಂಕ:6-2-2004 ರ ಲಿಖಿತ ಉತ್ತರ ಪರಿಗಣಿಸಿ ಸೂಕ್ತ ಆದೇಶ ಹೊರಡಿಸುವಂತೆ ಸೂಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಆರೋಪಿತರ ಉತ್ತರ ಹಾಗೂ ಕೆ.ಎ.ಟಿ.ನಿರ್ದೇಶನದಂತೆ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ:ಸಿಆಸುಇ 109 ಎಸ್ಇ ಎನ್ 2003, ಬೆಂಗಳೂರು 10ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪಿ.ಪ್ರಕಾಶ್, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಶ್ರೀ ಕೆ.ಬಿ.ವೈದ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆ ಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96 ದಿನಾಂಕ: 24-4-1998 ರಂತೆ ರೂ.5,000-00(ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:4-3-2002 ರಂತೆ ರೂ.1000-00 ( ಒಂದು ಸಾವಿರ ರೂಪಾಯಿಗಳು ಮಾತ್ರ ) ವಾಹನ ಭತ್ಯೆಗಳನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಚೀಫ್ ಅಡ್ಮಿನಿಸ್ಟ್ರೇಟಿವ್ ಆಫೀಸರ್ ಕೆ.ಹೆಚ್.ಎಸ್.ಡಿ.ಪಿ., ಶೇಷಾದ್ರಿ ರಸ್ತೆ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಮಂಡನಾಧಿಕಾರಿಯವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳ ಒಳಗಾಗಿ ಮುಕ್ತಾಯಗೊಳಿಸಿ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ,**

ಪಿ.ಆರ್. 1251 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

